# ನಮ್ಮ ಸಮಾಜ

(ಬೆಂಗಳೂರು "ಜಿ. ಆರ್. ಎಸ್. ಕ್ಲಬ್" ಮಂಡಲಿಯವರು
ಅಭಿನಯಿಸುವುದಕ್ಕಾಗಿ ರಚಿಸಲ್ಪಟ್ಟುದು)

**ಸಿ. ಕೆ. ವೆಂಕಟರಾಮಯ್ಯ,**
ಎಂ.ಎ., ಎಲ್‌ಎಲ್.ಬಿ.

# ಪ್ರಸ್ತಾವನೆ

ಇದು ಹಾಸ್ಯರಸ ಮಿಳಿತವಾಗಿರುವಂತೆ ಬರೆದಿರುವ ಸಾಮಾಜಿಕ ರೂಪಕ. ವ್ಯಕ್ತಿದ್ವೇಷದಿಂದ, ಅಥವಾ ಇತರರನ್ನು ಅಪಹಾಸ್ಯಮಾಡುವ ಉದ್ದೇಶದಿಂದ ನಾನು ಈ ಗ್ರಂಥವನ್ನು ಬರೆದಿಲ್ಲ. ಯಾವುದೊಂದು ಪ್ರತ್ಯೇಕ ವ್ಯಕ್ತಿಯನ್ನೇ ಆಗಲಿ, ಹೆಸರನ್ನು ಬದಲಾಯಿಸಿ ರಂಗಭೂಮಿಗೆ ತಂದಿಲ್ಲ. ಸಾಮಾಜಿಕ ರೂಪಕಗಳನ್ನು ಬರೆದರೆ, ಕೆಲವು ಅಂಶಗಳು ಕೆಲವು ವ್ಯಕ್ತಿಗಳಿಗೆ ಅನ್ವಯಿಸುವಂತಿರುವ ಸಂಭವವುಂಟು. ಇದು ಅಪರಿಹಾರ್ಯ ವೆಂಬುದನ್ನು ನಾನು ವಾಚಕರಿಗೆ ಶ್ರುತಪಡಿಸಬೇಕಾದುದೇ ಆವಶ್ಯಕವಿಲ್ಲ. ಆದರೂ, ನಾನು ಯಾರೊಬ್ಬ ವ್ಯಕ್ತಿಯನ್ನೂ ಉದ್ದೇಶಿಸಿ ಈ ಗ್ರಂಥವನ್ನು ಬರೆದಿಲ್ಲ.

ನಮ್ಮ "ಜಿ. ಆರ್. ಎಸ್. ಕ್ಲಬ್" ಮಂಡಲಿಯ ಕೆಲವರು ಸದಸ್ಯರು ಒಂದು ಸಾಮಾಜಿಕ ರೂಪಕವನ್ನು ಬರೆದುಕೊಡಬೇಕೆಂದು ಕೇಳಿದರು. ಅವರು ನನ್ನಲ್ಲಿ ಪ್ರೀತಿಯಿಟ್ಟು ಆ ರೀತಿ ಆದರದಿಂದ ಕೇಳಿದುದಕ್ಕಾಗಿ ಕೃತಜ್ಞನಾಗಿದ್ದೇನೆ. ಅವರ ಕೋರಿಕೆಯಂತೆ ಈ ಗ್ರಂಥವನ್ನು ರಚಿಸಿದೆನು. ಅವರು ಇದನ್ನು ಉತ್ತಮ ರೀತಿಯಲ್ಲಿ ಅಭಿನಯಿಸಿದರು. ವ್ಯಾಕರಣ ಬದ್ಧವಾದ ಶೈಲಿಯು ಈ ವಿಧದ ಗ್ರಂಥಗಳಿಗೆ ಒಪ್ಪುವುದಿಲ್ಲವಾದಕಾರಣ, ಶುದ್ಧವಾದ ಶೈಲಿಯಲ್ಲಿ ಈ ರೂಪಕವನ್ನು ರಚಿಸಿಲ್ಲ. ಕನ್ನಡಿಗರು ನನ್ನ ಈ ಅಲ್ಪ ಸೇವೆಯಿಂದ ಸಂತೋಷಿಸುವುದಾದರೆ, ನಾನು ಕೃತಾರ್ಥನೆಂದೆಣಿಸು ವೆನು. ಈ ಗ್ರಂಥವನ್ನು ಆದರದಿಂದ ಓದಿಯೂ, ಓದಿಸಿ ಕೇಳಿಯೂ, ನಾಟಕಾಭಿನಯವನ್ನು ನೋಡಿಯೂ ತಮ್ಮ ಸಂತೋಷವನ್ನು ಸೂಚಿಸಿದ ನನ್ನ ಮಿತ್ರರಿಗೂ, ಒಟ್ಟು ಕರ್ಣಾಟಕದಲ್ಲೇ ಸಾಹಿತ್ಯ ಕ್ಷೇತ್ರದಲ್ಲಿ ಸುಪ್ರ ಸಿದ್ಧರಾಗಿರುವ ಅನೇಕ ಮಂದಿ ಹಿರಿಯರಿಗೂ ನಾನು ಅತ್ಯಂತ ಕೃತಜ್ಞ ನಾಗಿದ್ದೇನೆ. ಮೈಸೂರು ವಿಶ್ವವಿದ್ಯಾನಿಲಯದವರು ಇದನ್ನು ೧೯೩೩ನೆಯ ಇಂಟರ್ಮೀಡಿಯೇಟ್ ಪರೀಕ್ಷೆಗೆ ಪಠ್ಯಪುಸ್ತಕವಾಗಿ ಗೊತ್ತುಮಾಡಿದ್ದಾರೆ. ಇದಕ್ಕಾಗಿ ನಾನು ಅವರಿಗೆ ವಿಶೇಷ ಕೃತಜ್ಞನಾಗಿದ್ದೇನೆ.

ಬೆಂಗಳೂರು,
ತಾ॥ ೨೦—೮—೧೯೩೧.

**ಸಿ. ಕೆ. ವೆಂಕಟರಾಮಯ್ಯ.**

## ಪಾತ್ರಗಳ ವಿವರ

| | | |
|---|---|---|
| ರಂಗರಾಯ | .. | ಬೆಂಗಳೂರಿನ ಒಬ್ಬ ಹಣಗಾರ |
| ಯಶೋದಮ್ಮ | .. | ಆತನ ಹೆಂಡತಿ |
| ಕೃಷ್ಣಮೂರ್ತಿ | .. | ಆತನ ಮಗ |
| ರಾಮಚಂದ್ರನ್<br>ನಾರಾಯಣಶಾಸ್ತ್ರಿ<br>ರಾಘವೇಂದ್ರರಾಯ | .. | ಕೃಷ್ಣಮೂರ್ತಿಯ ಸ್ನೇಹಿತರು |
| ರಾಮಾಜೋಯಿಸ | .. | ರಂಗರಾಯನ ಪುರೋಹಿತ |
| ಗೋಪಾಲರಾಯ<br>ಶಾಮಾಶಾಸ್ತ್ರಿ<br>ಗೋವಿಂದಸೆಟ್ಟಿ | .. | ರಂಗರಾಯನ ಸ್ನೇಹಿತರು |
| ರಾಜಾರಾಯ | .. | ವೈದ್ಯ ("ಡಾಕ್ಟರು") |
| ಗೌರಮ್ಮ | .. | ರಾಮಾಜೋಯಿಸನ ಹೆಂಡತಿ |
| ಲಲಿತಾಂಬ | .. | ರಾಮಾಜೋಯಿಸನ ಮಗಳು |
| ರಂಗಮ್ಮ | .. | ಗೋಪಾಲರಾಯನ ಹೆಂಡತಿ |
| ಅಬ್ದುಲ್ ಲತೀಫ್ | .. | ರಂಗರಾಯನ ಮನೆಯ ಆಳು |

ಕಾವೇರಮ್ಮ ಮುಂತಾದ ಸ್ತ್ರೀಯರು, ಕೃಷ್ಣಮೂರ್ತಿಯ ಪತ್ನಿಯಾದ ಐರೋಪ್ಯ ಹೆಂಗಸು, ಭಿಕ್ಷುಕ, ಸಾಹುಕಾರರು ಇತ್ಯಾದಿ.

# ನಮ್ಮ ಸಮಾಜ

## ಮೊದಲನೆಯ ಅಂಕ

[ಬೆಂಗಳೂರು. ರಂಗರಾಯರ ಮನೆಯಲ್ಲಿ ಅವರ ಕೊಟಡಿ. ಜಮಖಾನ ಹಾಸಿರುವುದು. ಧನಿಕರ ಮನೆಗೆ ತಕ್ಕಂತೆ ನವನಾಗರಿಕತೆಯ ಸಾಮಾನುಗಳು ತುಂಬಿರುವುವು. ಕುರ್ಚಿಗಳೂ, ಸೋಫಾಗಳೂ ಇರುವುವು. ಗೋಡೆಯ ಮೇಲೆ ಕ್ಯಾಲೆಂಡರು, ಕೆಲವು ಭಾವಚಿತ್ರಗಳು, ಕೆಲವು ಐರೋಪ್ಯ ಸಂಪ್ರದಾಯದ ಚಿತ್ರಪಠಗಳು—ಇವೆಲ್ಲ ಇರುವುವು. ರಂಗರಾಯನೂ, ಅವನ ಸ್ನೇಹಿತ ಗೋಪಾಲರಾಯನೂ ಮಾತನಾಡುತ್ತ ಕುಳಿತಿರುವರು.]

**ರಂಗರಾಯ.**—ಏನಯ್ಯ ಗೋಪಾಲರಾವ್, ‘ಇವತ್ತು ಒಳ್ಳೆಯ ಸಮಯಕ್ಕೇ ನೀನು ಬಂದೆ. ನಾನೇ ಬಂದು ನಿನ್ನ "ಅಡ್ವೈಸ್" ಕೇಳಬೇಕೂ ಅಂತಿದ್ದೆ. ಅಷ್ಟರಲ್ಲಿ ನೀನೇ ಬಂದೆ. ನಾನೇನೋ ಈ ಸಲ ಎಲೆಕ್ಷನ್ನಿಗೆ ನಿಂತುಬಿಡಬೇಕೂ ಅಂತ ಮಾಡಿದ್ದೀನಿ.

**ಗೋಪಾಲರಾಯ.**—ಎಲೆಕ್ಷನ್ನಿಗೆ ನಿಂತುಬಿಡೋದೇನೋ ಸರಿ. ಆಮೇಲೆ ಕೂತುಬಿಡಬೇಕಾದರೇನು ಮಾಡ್ತೀಯಯ್ಯ, ರಂಗರಾವ್?

**ರಂಗರಾಯು.**—ಹಾಗೆಂದರೇನಯ್ಯ?

**ಗೋಪಾಲರಾಯ.**—ಇಷ್ಟಕ್ಕೆ ಅರ್ಥ ತಿಳೀದೇ ಹೋದಮೇಲೆ ನೀನು ಸಭೆಗೆ ಹೋಗಿ ಕಡಿಯೋದೇನೋ ಕಾಣೆ. ನಾನು ಹೇಳಿದ್ದು ಎಲೆಕ್ಷನ್ನಲ್ಲಿ ನೀನು ಬಿದ್ದುಹೋದರೇನು ಮಾಡ್ತೀ—ಅಂತ?

**ಶಾಮಾಶಾಸ್ತ್ರಿ.**—(ನಾಗರಿಕ ಸಂಪ್ರದಾಯದ ಉಡುಪನ್ನು ಧರಿಸಿ ಪ್ರವೇಶಿಸಿ) ಅದೇನಿರಯ್ಯ, ಎದ್ದುಹೋಗೋದು ಬಿದ್ದು ಹೋಗೋದು ಅಂತ ಏನೇನೋ ಹೇಳ್ತೀರಿ?

**ಗೋಪಾಲರಾಯ.**—ನೋಡಯ್ಯ, ಶಾಮಾಶಾಸ್ತ್ರಿ, ರಂಗರಾವ್ ಎಲೆಕ್ಷನ್ನಿಗೆ ನಿಲ್ಲಬೇಕೂ ಅಂತ ಇದ್ದಾನಂತೆ.

**ರಂಗರಾಯ.**—ಬಾರಯ್ಯ, ಶಾಸ್ತ್ರಿ. ನಾನು ಈ ಸಲ ಎಲೆಕ್ಷನ್ನಿಗೆ ನಿಂತೇಬಿಡಬೇಕೂ ಅಂತ ನಿರ್ಧರಮಾಡಿದ್ದೀನಿ. ರಾತ್ರಿಯೆಲ್ಲಾ, ಹಾಳು, ನಿದ್ರೆಯೇ ಬರಲಿಲ್ಲಯ್ಯಾ. ಕೊನೆಗೂ ನಿರ್ಧರಿಸಿಬಿಟ್ಟೆ. ಈ ಗೋಪಾಲ ರಾವ್ ಶಕುನದ ಹಕ್ಕಿ ಹಾಗೆ ನನಗೆ ಅದಾಗೋಲ್ಲ ಅಂತ ಹೇಳ್ತಾ ಇದ್ದಾನೆ.

**ಗೋಪಾಲರಾಯ.**—ನಿರ್ಧರಿಸಿಬಿಟ್ಟಮೇಲೆ ನಮ್ಮನ್ನೇಕೆ ಕೇಳ ಬೇಕಯ್ಯ?

**ಶಾಮಾಶಾಸ್ತ್ರಿ.**—(ಕುರ್ಚಿಯಮೇಲೆ ಕುಳಿತುಕೊಂಡು) ಅದು ಕಲ್ಚರ್ ಲಕ್ಷಣವಯ್ಯ. ಹೆಂಡತಿ ಸೊಗಸು ಮಾಡಿಕೊಂಡು ಬಂದು "ಏನು, ಅಂದ್ರೆ ಇವತ್ತು ಬಯಾಸ್ಕೋಪಿಗೆ ಹೋಗೋಣವೆ? ಹೇಳಿ ಅಂದ್ರೆ" ಎಂತ ಕೇಳಿದ ಹಾಗೆ. ಅಲಂಕಾರವಾದಾಗಲೇ ಬಯಾಸ್ಕೋಪಿಗೆ ಹೋಗೋದು ಗೊತ್ತಾಗಿ ಹೋಗಿರುತ್ತೆ. ಯಜಮಾನ "ಸೋಬಾನೆ" ಹೇಳೋದೇ ಬಾಕಿ. ಅವನು ಸುಳು ತಿಳಿದು "ತಥಾಸ್ತು" ಅಂದನೋ ಬದುಕಿದ. ಇಲ್ಲದೆಹೋದರೆ ಒಂದು ವಾರ ಮನೇಲಿ·ಜರ್ಮನ್ ವಾರ್. ನಿಂತ್ಕೊಂಡು ಬಿಡಯ್ಯ, ರಂಗರಾವ್, ನಿಂತುಕೊಂಡು ಬಿಡು, ಎಲೆಕ್ಷನ್ನಿಗೆ.

**ರಂಗರಾಯ.**—ಈ ಶಾಸ್ತ್ರಿ ಯಾವಾಗಲೂ ಬಫೂನ್ ಕೆಲಸ ಮಾಡೋನೆ. Come along, you fellows, we shall be serious now. ನೀನು ಸರಿಯಯ್ಯ, ಶಾಸ್ತ್ರಿ; ವಿದೂಷಕನಾಗಿಲ್ಲದಾಗ ನಿನ್ನ ಸಮಾನರಿಲ್ಲ. ನೀನು ಹೇಳಯ್ಯ.

**ಶಾಮಾಶಾಸ್ತ್ರಿ.**—ನೀನು ಆಗರ್ಭ ಶ್ರೀಮಂತ. ತುಂಬ ಕಲ್ಚರ್ಡ್ ಮ್ಯಾನ್. ಇದರ ಮೇಲೆ ನಿನ್ನ ಹೃದಯಾನೋ ಲಂಡನ್ ಪಟ್ಟಣದಷ್ಟು ವಿಸ್ತಾರವಾಗಿದೆ. ನಿನ್ನ ಹೆಂಡತೀನ ಕೂಡ ಅಪ್-ಟು-ಡೇಟ್ ಮಾಡಿಸಿದ್ದೀ. ನಾವೇನೋ ನಿನ್ನ ಅಡ್ಮೈರ್ ಮಾಡಿದರೂ, ನಮಗೆ ಅಷ್ಟು courage of conviction ಇಲ್ಲ. ನಿನ್ನ ಧೈರ್ಯ ಅಂದರೆ ಯಮ ಧೈರ್ಯವಯ್ಯ.

**ರಂಗರಾಯ.**—(ಸುಪ್ರೀತನಾಗಿ ಹಸನ್ಮುಖದಿಂದ) ಯಮ ಧೈರ್ಯವೂ ಇಲ್ಲ. ವರುಣ ಧೈರ್ಯವೂ ಇಲ್ಲ. ನಾನು ಕೇಳಿದ್ದಕ್ಕೆ ಉತ್ತರವೇ ಇಲ್ಲ. ಪಾಯಿಂಟು ಹಿಡಿದು ಮಾತನಾಡಬೇಕಯ್ಯ. ಅದು ಬಿಟ್ಟು ಎಲ್ಲೆಲ್ಲೋ ಹೋಗ್ತೀಯೆ.

**ಶಾಮಾಶಾಸ್ತ್ರಿ.**—ಪಾಯಿಂಟು ಹಿಡಿದು ಮಾತನಾಡೋಕೆ ನಾನೇನು ಗೋಪಾಲರಾಯನ ಹಾಗೆ ಅಡ್ವೊಕೇಟೇ? ಅಥವಾ ಇದೇನು ಎಗ್ಸಾಮಿನೇಷನ್ ರೂಮೇ?

**ಗೋಪಾಲರಾಯ.**—ನಾನು ಪಾಯಿಂಟ್ ಹಿಡಿದು ಮಾತ ನಾಡೋನು ಅಂತ ನಿಂಗೇನೂ ಹೇಳಿಲ್ಲ ಶಾಸ್ತ್ರಿ.

**ಶಾಮಾಶಾಸ್ತ್ರಿ.**—ನಿನಗೆ ಆ ಶಕ್ತಿಯಿದೇಅಂತ ನಾನು ತಾನೇ ಹೇಳಿದೆನೆ, ಈಗ? ರಂಗರಾವ್, ನಿನ್ನಂಥವನು ಮೆಂಬರಾಗಬೇಕಯ್ಯ. ಧನಿಕನಾಗಿದ್ದು ಮೆಂಬರಾಗದೆ ಹೋದರೆ ಹೇಗೆ? ಆದರೆ ನನಗೆ ಒಂದೇ ಯೋಚನೆ.

**ರಂಗರಾಯ.**—ಏನು, ನಿನ್ನ ಯೋಚನೆ?

**ಶಾಮಾಶಾಸ್ತ್ರಿ.**—ದುಡ್ಡು ಸುರಿಮಳೆಯಾಗಬೇಕಲ್ಲಯ್ಯ. ಊರೂ ರಿಗೂ ತಿರುಗಬೇಕು. ಪತ್ರಿಕೆಗಳಲ್ಲಿ ಪ್ರಕಟಣೆಗಳಾಗಬೇಕು. ಫೋಟೋ ಅಚ್ಚುಗಳು ಸಿದ್ಧವಾಗಬೇಕು. ಇದ್ದದ್ದು, ಇಲ್ಲದ್ದು, ಇರುವುದಾಗಿ ತೋರಿದ್ದು ಎಲ್ಲಾ ಸೇರಿಸಿ, ಪುಂಖಾನುಪುಂಖವಾಗಿ ನಿನ್ನ ಪ್ರತಾಪ ಪದೇ ಪದೇ ಬರೆಸಬೇಕು. ಇತರ ಉಮೇದುವಾರರೆಲ್ಲ ಅಪ್ರಯೋಜಕರೆಂದು ಬಯ್ಯಬೇಕು. ಇದೆಲ್ಲಕ್ಕೂ ಹಣದ ಮೇಲೆ ಹಣ ಎರಚಬೇಕಲ್ಲ.

**ರಂಗರಾಯ.**—ಹೋಗಲೇಳು. ಸುಖಕ್ಕೂ ಮರ್ಯಾದೆಗೂ ಇಲ್ಲದ ದುಡ್ಡು ದುಡ್ಡೇ ಅಲ್ಲ. ಇದರ ಮೇಲೆ ದೇಶಕ್ಕೂ ಕೊಂಚ ಸರ್ವಿಸ್ ಆಗುತ್ತೆ.

**ಅಬ್ದುಲ್ ಲತೀಫ್.**—(ಪ್ರವೇಶಿಸಿ) ಸಲಾಂ, ಸಲಾಂ, ಸಾಮಿ. ಅದೇನೋ ಶಕಾರ ಅಂತೆ. ಆಚಾರಿ ಅಂತೆ. ಅದೇನೋ ಅವರ ಅರ್ಥಾ ಆನೇ ಅಂತೆ. ಬಂದಿದ್ದಾರೆ.

**ರಂಗರಾಯ.**—ಹಾಗೆಂದರೇನೋ. ಅವರನ್ನ ಕರಿ. ಅರ್ಧಾ ಆನೇ ಅಂದರೇನೋ? ನೀನೊಬ್ಬ ಶುದ್ಧ ಮುಟ್ಠಾಳ.

**ಅಬ್ದುಲ್ ಲತೀಫ್.**—ಮಾಫ್ ಕರ್ನಾ. ಅವರೇ ಹೇಳಿದ್ದು ನಾನು ಹೇಳ್ದೆ, ಸಾಮಿ. ಚಂದಾ ಬೇಕಂತೆ. ದೇಷಕ್ಕೆ ಸೇವೇನಂತೆ.

**ಗೋಪಾಲರಾಯ.**—ಶಂಕರಾಚಾರ್ಯರ ಆರಾಧನೆಗೆ ಚಂದಾ ಇರಬಹುದು.

**ಅಬ್ದುಲ್ ಲತೀಫ್.**—ಅದೇ, ಅದೇ, ಅರ್ಧಾ ಆನೆ. ಆಚಾರೀದು.

**ರಂಗರಾಯ.**—ಲತೀಫ್, ಅವರನ್ನ ಹೋಗಿ ಅನ್ನು. ಎಂದೋ ಸತ್ತೋರಿಗೆ ಆರಾಧನೆ. ದುಡ್ಡು, ಇವರ ತಾತನ ಗಂಟೆ? ವೈಗಳ್ಳರೆಲ್ಲ ಸೇರಿ ಬೊಜ್ಜ ಬೆಳೆಸೋಕೆ. ಹೋಗಿ, ಅನ್ನು.

(ಅಬ್ದುಲ್ ಲತೀಫ್ ಹೋಗುವನು.)

**ಗೋಪಾಲರಾಯ.**—ಹಿಂದಾಗಿದ್ದರೆ, ವೋಟು ಕೊಡೋರಲ್ಲಿ ಕೆಲವರಿಗೆ—ಕೆಲವರಿಗೆ ಮಾತ್ರ—ಎಡಗೈಗೊಂದು ರೂಪಾಯಿ, ಬಲಗೈಗೊಂದು ರೂಪಾಯಿ, ಕೊಟ್ಟಿದ್ದರೆ ವೋಟುಗಳ ಸುಗ್ಗಿಯಂತೆ. ಕೆಲವರಿಗೆ ಚುನಾವಣೆ ದಿನ ಮೃಷ್ಟಾನ್ನ ಭೋಜನ ಹಾಕಿ, ಅಂಬೊಡೆ ರಾಶಿ, ಹಾಲು ಕೀರಿನ ಹೊಳೆ ತೋರಿಸಿ ವೋಟು ಹೊಡಿಯಬಹುದಾಗಿತ್ತಂತೆ. ಎಲ್ಲರೂ ಇಂಥ ಬಲೆಗೆ ಬೀಳೋಲ್ಲ ಅಂತಿಟ್ಟುಕೊ. ಈಗ ಮಾತ್ರ ಅದೊಂದಕ್ಕೂ ಮಾರ್ಗವಿಲ್ಲ. ಸರ್ಕಾರದ ರೂಲ್ಸು ಬಹಳ ಕಟ್ಟುನಿಟ್ಟು. Strict ಆಗಿ ಹೋಗಿದೆ. ಜನಗಳು ಬಹಳ ತಯಾರಾಗಿ ಹೋಗಿದ್ದಾರೆ. ಇಂಥೋರಿಗೆ "ವೋಟುಕೊಡಿ" ಅಂತ ಗೋಡೆಮೇಲೆ posters ಅಂಟಿಸಿದರೆ, "ಏಟು ಕೊಡಿ" ಅಂತ ತಿದ್ದಿಬಿಡುತ್ತಾರೆ. ಹೋದಸಲ ಒಂದು ಕತ್ತೆಯ ಕೊರಳಿಗೆ ಒಂದು ರಟ್ಟು ಕಟ್ಟಿ, ಆ ರಟ್ಟಿನ ಮೇಲೆ, "ನನಗೊಂದು ವೋಟು ಕೊಡಿ" ಎಂತ ಬರೆದಿದ್ದರಂತೆ. ಹೀಗಿದ್ದಾರೆ ಜನ. ಅದಕ್ಕೋಸ್ಕರವೇ ನಾನು ಯಾವಾಗಲೂ ಎಲೆಕ್ಷನ್ನಿಗೆ ನಿಲ್ಲಲೇ ಇಲ್ಲ.

**ಶಾಮಾಶಾಸ್ತ್ರಿ.**—ಸರಿಹೋಯಿತು. ನೀನು ನಿಲ್ಲದೆ ಇದ್ದಮೇಲೆ ಯಾರೂ ನಿಲ್ಲಲೇ ಬಾರದು, ಅಲ್ಲವೆ? ಕುರುಡನಿಗೆ ದೀಪ ಬೇಡವಾದರೆ

ಹೊಲಕ್ಕೇ ಹರಳು ಬಿತ್ತಬೇಡ. ಅಯ್ಯೋ, ಹೋಗಯ್ಯ, ಕೈ ಕೆಸರಾದರೆ, ಬಾಯಿ ಮೊಸರು. ಕಷ್ಟಪಡದೇ ಸುಖ ಬಂದೀತೆ? ಅಲ್ಲಯ್ಯ, ನಾವಿಬ್ಬರೂ ನಮ್ಮ ರಾಯನ ಕ್ಲಾಸ್‌ಮೇಟುಗಳು. ರಾಯ ಫೇಲಾಗಿ ಫೇಲಾಗಿ ಓದೋದು ಬಿಟ್ಟುಬಿಟ್ಟ. ನಾನು ನಮ್ಮಪ್ಪ ಸತ್ತದ್ದಕ್ಕೆ ಓದು ಬಿಟ್ಟುಬಿಟ್ಟೆ. ಏನೋ ನೀನೊಬ್ಬ ಬಿ.ಎ., ಲಬೋಲಬಿ, ಅಲ್ಲ, ಅಲ್ಲ, ಎಲೆಲ್.ಬಿ., ಎಲ್ಲಾ ಪ್ಯಾಸುಮಾಡಿ ಅಡವೀಕೋತಿ ಊರಿನಲ್ಲಿದೆ ಅಂತ ಬೋರ್ಡುಹಾಕಿದ್ದೀಯೆ. ಏನೋ ತನ್ನ ಜೊತೇಲಿ ಓದಿದೋರು ಅಂತ ನಮ್ಮ ರಾಯ ನಮ್ಮೆದುರಿಗೆ ಹೃದಯ ಬಿಚ್ಚಿ ಹೇಳಿಕೊಂಡದ್ದಕ್ಕೆ ಎಷ್ಟು ಚೆನ್ನಾಯಿತೋ! ಕೊಳ್ಳಿ ತೊಗೊಂಡು ತಲೆ ತುರಿಸಿಕೊಂಡಹಾಗೆ. ಇವನು ನಿಲ್ಲಲಿಲ್ಲವಂತೆ. ರಾಯನೂ ನಿಲ್ಲಬೇಡವಂತೆ. ಪ್ಯಾಸುಗಳು ಹೆಚ್ಚಾಗ್ತಾ ಆಗ್ತಾ, ವಯಸ್ಸು ಆಗ್ತಾ ಆಗ್ತಾ, ಅರಳಿಸ ರಾಶೀಗೆ ನೀರು ಬೀಳ್ತಾ ಬಂದಹಾಗೆ ಧೈರ್ಯವೇ ಉಡುಗಿಹೋಗುತ್ತೊ ಏನೋ! ಎತ್ತರ ಹೆಚ್ಚಿದಷ್ಟೂ "ಬಿದ್ದರೇನು ಗತಿ?" ಅಂತ ಭಯವೂ ಹೆಚ್ಚು. ಗೊತ್ತೇ ಇದೆ.

**ರಂಗರಾಯ**—ಶಾಸ್ತ್ರಿ ಯಾವಾಗಲೂ ಒಂದೇ; ಅವನ ಬಾಯಿ ಕೆಣಕಿ ಬದುಕಿದ ಪಾಪವುಂಟೆ? "ಕೆಟ್ಟು ಪಟ್ಟಣ ಸೇರು" ಅನ್ನೋದಕ್ಕಿಂತ "ಓದುಹೋದರೆ ವೈದ್ಯ ಹಿಡಿ" ಎನ್ನೋದು ಮೇಲು. ಶಾಸ್ತ್ರಿ ಬಾಯಿಗೆ ರೋಗಗಳೂ ಹೆದರಿಕೊಂಡು ಓಡಬಹುದು. ಅದಕ್ಕೇ ಅಳಲೇಕಾಯಿ ವೈದ್ಯ ಹಿಡಿದು ಇಂಗ್ಲಿಷ್ ವೈದ್ಯದಲ್ಲೂ ಬರದಷ್ಟು ದುಡ್ಡು ಹೊಡೀತಾನೆ, ಶಾಸ್ತ್ರಿ.

**ಶಾಮಾಶಾಸ್ತ್ರಿ**—ನನ್ನ ಹಸ್ತ ಗುಣ ನೀನೇನು ಬಲ್ಲೆ? ಇಂಗ್ಲಿಷ್ ಬರೋದರಿಂದ ಹಸ್ತಗುಣದ ಖರಾಮತ್ತು ಇನ್ನೂ ಜೋರು. ಈ ಕಾಲದ ಕೆಲವು ಕುರಿಗಳ್ಗೆ ಯೂರೋಪು ಶಂಖದಲ್ಲಿ ಬಿದ್ದದ್ದೆಲ್ಲಾ ಪಾಪನಾಶಿನೀ ತೀರ್ಥ. ಆದರೂ, ದುಡ್ಡು ಸಾಲದಯ್ಯ. ದುಡ್ಡು ಸಾಲದು.

**ಗೋಪಾಲರಾಯ**—ಅಲ್ಲಯ್ಯಾ ಶಾಸ್ತ್ರಿ, ಹಾಗಾದರೆ ವೋಟು ಬರೋದು ಸುಲಭವಾಗಿ ನಡೆದುಹೋಗುತ್ತೋ, ಅದಾದರೂ ಹೇಳು.

**ಶಾಮಾಶಾಸ್ತ್ರಿ.**—ವೋಟು ಸುಲಭ, ಸುಲಭ, ಅಬ್ಬ. ಇಲ್ಲಮ್ಮಾ, ಲೋ, ಅದರ ಉದ್ದಕ್ಕೂ ಮಣ್ಣುಮುಕ್ಕಿದರೇ ಮತ್ತೆ, ಅದು ದೊರೆ ಯೋದು. ನಾನು ಮೊದಲೇ ಹೇಳಿದೆನಲ್ಲಾ, ಆ ಕೆಲಸಗಳೆಲ್ಲಾ ಮಾಡ ಬೇಕು. ಸರಿಯಾದ ಚಿಹ್ನೆ ಹಾಕಿಸಿಕೋಬೇಕು. (ನಕ್ಕು) ಒಬ್ಬರು ಹಸು ಹಾಕಿಸಿಕೊಂಡಿದ್ದರಂತೆ. ಎದುರು ಕಡೆಯವರು "ಅವನು ಹಸುವಿನಂಥ ಹ್ಯಾಪ ಮನುಷ್ಯ, ಕೈಲಾಗದೋನು, ಅಂತ ಸರ್ಕಾರದವರೇ ಅವನ ಪಕ್ಕದಲ್ಲಿ ಹಸುವಿನ ಚಿತ್ರ ಹಾಕಿದ್ದಾರೆ. ಅವನಿಗೆ ವೋಟು ಕೊಡಬೇಡಿ," ಎಂತ ಬೋಧಿಸಿದರಂತೆ ಜನಕ್ಕೆ.

**ಗೋಪಾಲರಾಯ.**—(ನಗುತ್ತ) ಹಾಗೆ ಬಾರಣ್ಣಾ, ಹಾಗೆ ಬಾ, ನಾನೂ ಕೇಳಿದ್ದೀನಿ. ಸಿಂಹ ಹಾಕಿಕೊಂಡರೆ ಘಾತುಕ ಅಂತಾರಂತೆ. ನೇಗಿಲು ಹಾಕಿಕೊಂಡರೆ ಉಳೋಕೆ ಲಾಯಖ್ಖು ಅಂತ ಸರ್ಕಾರದವರು ಹಾಗೆ ನೇಗಿಲು ಚಿಹ್ನೆ ಹಾಕಿಸಿದ್ದಾರೇ ಎಂತ ದೂರು ಹೊರಿಸುತ್ತಾರಂತೆ. ತಕ್ಕಡಿ ಹಾಕಿಕೊಂಡರೆ, ತೂಗಿ ನೋಡಿ ವೋಟು ಕೊಡಲೀ ಅಂತ ಹಾಗೆ ಮಾಡಿದ್ದಾರೆಂಬ ಆಕ್ಷೇಪಣೆ. ಹಕ್ಕಿ ಹಾಕಿಕೊಂಡರೆ "ತಲೇಲಿ ಬುದ್ಧಿ ಇಲ್ಲದೆ ಅಂತರಿಕ್ಷದಲ್ಲಿ ಹಾರಾಡುವ ಮನುಷ್ಯ. ಹುಷಾರ್" ಎಂತ ಸರ್ಕಾರದವರ ಅಭಿಪ್ರಾಯ ಅಂತಾರಂತೆ. ಸಾಕಪ್ಪಾ ಸಾಕು. ಈ ವೋಟಿಗಾಗಿ ತೊಳಲಿ ಬಳಲುವವರ ಸುಖ ನಮ್ಮ ಶತ್ರುಗಳಿಗೂ ಬೇಡ.

**ಶಾಮಾಶಾಸ್ತ್ರಿ.**—ನಮ್ಮ ಶತ್ರುಗಳಿಗೆ ಬೇಡ. ನಮ್ಮ ಮಿತ್ರ ರಂಗರಾವಿಗಿರಲಿ. Heart and soul ಕೆಲಸ ಮಾಡಿ help ಮಾಡೋ ಣಯ್ಯ. ರಾಯನಿಗೆ ಬರಲಿ. ನೀನು human nature ಕಂಡ ಮನುಷ್ಯ. ಏಕೆಂದರೆ ಮನುಷ್ಯರೇ ನಿನ್ನ ಚಲಾವಣೆ ನಾಣ್ಯಗಳು. ಹೇಳಯ್ಯ, ಏನು ಮಾಡಿದರೆ ರಾಯನಿಗೆ ವೋಟು ಸಿಕ್ಕುತ್ತೆ?

**ಗೋಪಾಲರಾಯ.**—ವೋಟು ಬರುವ ಹಾಗೆ ಮಾಡುವುದ ಕ್ಕೇನೋ ಆದಷ್ಟು ಹೆಣಗಬಹುದು. ನಾವಿಬ್ಬರೂ ಸಹಾಯಕ್ಕೆ ನಿಲ್ಲು ತ್ತೇವೆ. ಆದರೂ, ನೀನು ಪ್ರಜಾಪ್ರತಿನಿಧಿ ಸಭೆಗೆ ಮೆಂಬರಾಗೋಕೆ ತಕ್ಕೋನೇ ಅಂತ ನನ್ನ ಪ್ರಶ್ನೆ? ಅಲ್ಲೆಲ್ಲಾ ಎಂಥೆಂಥೋರೋ

ಬರ್ತಾರೆ. ನಮ್ಮ ಕನ್ನಡ ಪಂಡಿತರು ಯಾರನ್ನಾದರೂ ಗಟ್ಟಿಗರನ್ನ ವರ್ಣಿಸೋರು ನೋಡು—ಅದೇನಪ್ಪಾ, ಅದು, ಈ ಹಾಳು ಕನ್ನಡ, ಸಂಸ್ಕೃತ, ಮರೆತೇ ಹೋಗುತ್ತೆ—ಶುದ್ಧ dirty languages—ಜ್ಞಾಪಕ ಬಂತು, ಅತಿರಥ ಮಹಾರಥರೂ ಅಂತ, ಅಂಥವರೆಲ್ಲಾ ಅಲ್ಲಿ ಬಂದಿರ್ತಾರೆ. ನೀನು ಉತ್ತರ ಕುಮಾರ, ಅಲ್ಲಿ ಹೋಗಿ ಮಾಡುವುದೇನೂ, ಅಂತ?

**ರಂಗರಾಯ.**—ನೀವಲ್ಲದೆ ನನ್ನ ಹಾಸ್ಯ ಮಾಡುವವರು ಯಾರಿದ್ದಾರೆ? ಉತ್ತರಕುಮಾರ, ಅಂದೆ. ಅದೇಕಯ್ಯ ಹಾಗೆ ಹೇಳ್ತೀಯೆ?

**ಗೋಪಾಲರಾಯ.**—ಏಕೂ ಇಲ್ಲ. ಮನೇಲಿ ಅಮ್ಮಾವರನ್ನು up-to-date ಮಾಡಿಬಿಟ್ಟು, ಅವರ ಕೈಲಿ ಸಿಕ್ಕಿ ಕಣ್ಣುಕಣ್ಣು ಬಿಡ್ತಾ, ಅವರ ತಾಳಕ್ಕೆ ಕುಣೀತಾ ಇದ್ದೀಯಲ್ಲ, ಅದಕ್ಕೆ ಉತ್ತರ ಕುಮಾರ ಅಂದೆ. ನೀನು ಹೊರಗೆ ಗಿಡಗನಮರಿ, ಒಳಗೆ ಗುಬ್ಬಚ್ಚಿ ಮರಿ. ಅದೂ ಹೋಗಲಿ. ಹುಡುಗರೆದುರಿಗೆ ಡಿಬೇಟಿಂಗ್ ಸೊಸೈಟೀಲೇ ನೀನು ಬೆವತು ಹೋಗ್ತಿದ್ದೆ; ಇನ್ನು ಮೈಸೂರು ಸಭೇಲಿ ನಿನಗೆ ತೊಡೆ ನಡುಕ ಬರದೇ ಹೋದೀತೆ, ಬರದೇ ಹೋದೀತೇ—ಅಂತ.

**ರಂಗರಾಯ.**—ನಾನೇನೋ ಮನೇಲಿ ಗುಬ್ಬಚ್ಚಿ ಮರಿ. ಆದರೂ ನಿನ್ನಷ್ಟು hen-pecked husband ಅಲ್ಲ. ನಿಮ್ಮ ಕುಟುಂಬ ನಿನಗೆ ಕೆಲಸ ಹೇಳೋಕೆ ಇನ್ನೂ ಯೋಚನೆ ಮಾಡ್ತಾ ಇರುವಾಗಲೇ, ನೀನು ವಿಧೇಯನಾಗಿ obey ಮಾಡಿಬಿಟ್ಟಿರ್ತೀಯೆ. Thought force ಯುಗ ವಲ್ಲವೇ ಇದು! ಅಲ್ಲ, ಅಲ್ಲ, ಟೆಲಿಪತಿ. ಇನ್ನು serious ಆಗಿ ಮಾತಾಡೋಣ.

**ಶಾಮಾಶಾಸ್ತ್ರಿ.**—ಗೋಪಾಲರಾವ್ ಹೃದಯ ನೀನು ಕಂಡಿಲ್ಲ ವೇನಯ್ಯ? ಬೆಣ್ಣೆ, ಬೆಣ್ಣೆ ಅಂಥ ಹೃದಯ. ಅವನ ಮಾತು ಮಾತ್ರ ಒರಟು. ನೆಲ್ಲಿಮರಕ್ಕೆ ದೊಣ್ಣೆ ಎಸೆದ ಹಾಗೆ. ನಾವಿಬ್ಬರೂ ಸೇರಿ ನಿನಗೆ ಸಹಾಯ ಮಾಡುತ್ತೇವೆ, ಸುಮ್ಮನಿರಯ್ಯ.

**ರಂಗರಾಯ.**—ಏನಯ್ಯ, ಗೋಪಾಲರಾವ್?

**ಗೋಪಾಲರಾಯ.**—Certainly.

**ರಂಗರಾಯ.**—Many thanks. ಇಬ್ಬರಿಗೂ thanks.

**ಶಾಮಾಶಾಸ್ತ್ರಿ.**—ಇಬ್ಬರಿಗೂ ಇಲ್ಲದೆ ಇದ್ದರೆ, ಒಬ್ಬರ thanks ಇಬ್ಬರೂ ಹಂಚಿಕೋತೀವಿ. ತಿಂಡಿಯಾದರೆ, ಹಣಕಾಸಾದರೆ, ಕಷ್ಟ. ಈ thanks ಹಂಚಿಕೆ ಬಹಳ ಸುಲಭ. ಅದಿರಲಿ. ನೀನು ಎಲ್ಲಿ ಎಲೆಕ್ಷನ್ನಿಗೆ ನಿಲ್ಲೋದು ?

**ರಂಗರಾಯ.**—ಇಲ್ಲೇ ಬೆಂಗಳೂರಿನಲ್ಲೇ.

**ಶಾಮಾಶಾಸ್ತ್ರಿ.**—ಬೆಂಗಳೂರಿನಲ್ಲಿ ಕಷ್ಟವಯ್ಯ, ನಿಮ್ಮ ತಾಲ್ಲೋ ಕನ್ನೇ ಹಿಡಿದರೆ ಮೇಲು. ಅದೂ heaven and earth move ಮಾಡಿದರೆ, ನಿನ್ನ ಕೆಲಸ ಸಿದ್ಧಿಸಬಹುದು. ಬೆಂಗಳೂರಿನಲ್ಲಿ ಎಂಥೋರ ಬೇಳೆ ಬೇಯೋದೂ ಕಷ್ಟವೇ !

**ಗೋಪಾಲರಾಯ.**—ಬೆಂಗಳೂರಿನಲ್ಲಿ ಅಂಗಡಿ ಬೇಳೆ ಬೇಯೋದು ಕೂಡ ಕಷ್ಟ. ಶಾಸ್ತ್ರಿ ! ನೀನು ಹೇಳಿದ್ದೇ ಸರಿ. ತಾಲ್ಲೂಕಿನಿಂದ ನಿಲ್ಲೋದೇ ಮೇಲು.

**ರಂಗರಾಯ.**—ನೀವು ಹೇಳಿದ್ದು ನನಗೂ ಸಮ್ಮತ.

**ಶಾಮಾಶಾಸ್ತ್ರಿ.**—ಸಮ್ಮತವಿಲ್ಲದೆ ಹೋದರೆ ಯತ್ನವೇ ಇಲ್ಲ. ನೀನು ಅಲ್ಲಲ್ಲಿ ಕನ್ನಡದಲ್ಲಿ ಲೆಕ್ಚರ್ ಕೊಟ್ಟು, ಸ್ವದೇಶಾಭಿಮಾನದ ಅರಳು ಹುರಿದುಬಿಡಬೇಕು. ಜನರಿಗೆಲ್ಲಾ ಇದೇನು ಪೆಡಂಭೂತ ಬಂತಪ್ಪಾ ಎನ್ನಿಸಿಬಿಡಬೇಕು. ಲೆಕ್ಚರ್ ಕೇಳಿದೋರಿಗೆ ಅದರ ಭರಾಟೇಲಿ ನಾಲ್ಕರ ಛಳಿ ಕೂಡ ಬಿಟ್ಟು, ಮೈ ಬೆವರಿ ಹೋಗಬೇಕು. ಲೆಕ್ಚರ್ ಆ ರೀತಿ ಭರಾಟೆಮೇಲೆ ಬಿಡಬೇಕು.

**ರಂಗರಾಯ.**—ಕನ್ನಡದಲ್ಲೆ–ಆ–ಕನ್ನಡದಲ್ಲೆ ?

**ಶಾಮಾಶಾಸ್ತ್ರಿ.**—ಏಕಯ್ಯಾ, ಆಗಲೇ ಬೇಸ್ತು ಬಿದ್ದ ಮುಖ ಮಾಡ್ಕೋತಿ ? ಅದೂ ಮೂರನೇ ಬೇಸ್ತು ಮುಖ.

**ರಂಗರಾಯ.**—ಕನ್ನಡ ಪಂಡಿತರನ್ನ ಗೋಳಾಡಿಸಿದ್ದಕ್ಕೆ ಈಗ ಒಳ್ಳೆ ಕಷ್ಟ ಬಂತೆ ! ಇಷ್ಟಕ್ಕೂ ಆ ಹಾಳು ಕನ್ನಡ dirty language.

ಅದಕ್ಕೇ ನಾನು ನಮ್ಮ ಹುಡುಗನ್ನ ಫ್ರೆಂಚು ಭಾಷೆ ತೆಗೊ ಎಂದದ್ದು.

**ಗೋಪಾಲರಾಯ.**—Money can command anything and everything, I say.

**ರಂಗರಾಯ.**—ನನ್ನ ಈಗ ಕನ್ನಡ ಬುಕ್ಸ್ ಓದು ಅಂತೀಯೇನು?

**ಶಾಮಾಶಾಸ್ತ್ರಿ.**—ಏನಯ್ಯ, ಇಷ್ಟು ತಿಳೀಲಿಲ್ಲ? ಒಬ್ಬ ಬುದ್ಧಿವಂತನ್ನ ಹಿಡಿಯೋದು, ಲೆಕ್ಚರ್ ಬರಸಿ ಉರೂ ಹೊಡೆಯೋದು, ಕನ್ನಡಿ ಎದುರಿಗೆ ನಿಂತು ಪ್ರಾಕ್ಟಿಸ್ ಮಾಡೋದು, ಪ್ರತಿಬಿಂಬ ಅನ್ನೋ ಜೀವಾತ್ಮನೆದುರಿಗೆ ಪಾಠ ಒಪ್ಪಿಸೋದು, ಆಮೇಲೆ ಜನರೆದುರಿಗೆ ಭಿಕ್ಷೆ ಬಿಡೋದು, ಪೌಡರಿಲ್ಲದ ನಾಟಕ ಕಟ್ಟಿ, ದೇಶಭಕ್ತಿ ಅವಾಂತರ ಮಾಡಿ ಅಲೆ ಹಾರಿಸೋದು. ಇಷ್ಟು ಆಗಬೇಕು.

**ರಂಗರಾಯ.**—ಅಂಥವನು ಸಿಕ್ಕಬೇಕಲ್ಲಪ್ಪ. ಆ ಭಟ್ಟ ಕನ್ನಡದ ಆಥರ್ ಅಂತ ಕುಣೀತಾ ಇದ್ದಾನೆ. ಅವನು ಸಹಾಯಮಾಡಿಯಾನೆ?

**ಶಾಮಾಶಾಸ್ತ್ರಿ.**—ಆ ಆಥರ್ ನಂಬಿದರೆ ನೀನು ಈಥರಾಗಿ evaporate ಆಗ್ಹೋಗ್ತೀಯೆ.

**ಗೋಪಾಲರಾಯ.**—ಏನಯ್ಯ, ಶಾಸ್ತ್ರಿಯಾಗಿ ಭಟ್ಟನ್ನ ಬೈತೀಯೆ?

**ಶಾಮಾಶಾಸ್ತ್ರಿ.**—ಅವನ ಬರೆವಣಿಗೆ ಸೊಗಸಾಗಿರುತ್ತಯ್ಯ. ಆದರೆ ನಮ್ಮ ಕೆಲಸಕ್ಕೆ ಅದಲ್ಲ. ದೊಡ್ಡವರಿಗಾದರೆ ಉದ್ದಿನ ಕಡುಬಾದರೂ ಪರವಾ ಇಲ್ಲ. ಮಕ್ಕಳಿಗಾದರೆ ಹಾಲೇ ಆಗಬೇಕು. ಹಳ್ಳಿಯವರೆದುರಿಗೆ ಮಾತನಾಡಬೇಕಾದ ರೀತಿಯೇ ಬೇರೆ. ಅವರಿಗೆ ಸುಲಭವಾಗಿ ತಿಳಿಯಬೇಕು. ಇದೆಲ್ಲಾ ಆ ಮೇಲೆ ಮಾತಾಡಿಕೊಳ್ಳೋಣಯ್ಯ. ಕಾಲೇಜಿನಲ್ಲಿ ರಾಮಚಂದ್ರನ್ ಅಂತ ಒಬ್ಬ ಇದ್ದಾನೆ. ಪಿಡುಗಿನಂಥ ಹುಡುಗ. ಅವನು ಬಡಹುಡುಗ. ನಿನ್ನ ಮಗ ಕೃಷ್ಣಮೂರ್ತೀನ ಈ ಸಂಧಾನಕ್ಕೆ ಬಿಡು. ಆಮೇಲೆ ನಾನೂ ಹೇಳಿ ಎಲ್ಲಾ ಕುದುರಿಸಿ ಕೊಡ್ತೇನೆ. ಇನ್ನು ನಾನು ಹೊರಡ್ತೇನೆ. (**ಹೋಗುವನು.**)

**ಗೋಪಾಲರಾಯ.**—ನಾನು ತಮಾಷಿಗೆ ಬರಟೊರಟಾಗಿ ಪಿ[illegible] ವಾಗಿ ಮಾತನಾಡಿದೆನಯ್ಯ. Cheer up, my dear boy. ನಿನಗೆ ನಾವೆಲ್ಲಾ ಸಹಾಯಮಾಡ್ತೀವಿ. ಆದರೂ uphill work. ನಾನೂ ಹೋಗ್ತೀನೆ. (ಹೋಗುವನು.)

(ರಂಗರಾಯನು ಮೇಜಿನಮೇಲೆ ಕೈಯನ್ನು ಊರಿಕೊಂಡು ಅಂಗೈಯನ್ನು ಹಣೆಯ ಮೇಲಿಟ್ಟುಕೊಂಡು ಚಿಂತಿಸುತ್ತಿರುವನು.)

**ಯಶೋದಮ್ಮ.**—(ಪ್ರವೇಶಿಸಿ) ಏನು ಇಷ್ಟೊಂದು ಯೋಚನೆ?

**ರಂಗರಾಯ.**—(ಸ್ವಪ್ನವನ್ನು ಕಂಡು ಎದ್ದವನಂತೆ) ಆ, ಆ, ಯೋಚನೆಯೆ! ಏನೂ ಇಲ್ಲ. ನಿನ್ನ ಹೆಸರು ಯಶೋದಮ್ಮ, ನನ್ನ ಹೆಸರು ರಂಗರಾವ್. ನಾವು ಸ್ಮಾರ್ತರಾಗಿದ್ರೂ ಹೆಸರಿನಲ್ಲಿ ಥೇಟ್ ವೈಷ್ಣವರ ಹಾಗೇ ಇಲ್ಲವೇ ಅಂತ ಯೋಚಿಸ್ತಾ ಇದ್ದೆ ಅಷ್ಟೆ.

**ಯಶೋದಮ್ಮ.**—ನೀವು ಪೂರಾ ಘಾಟಿ ಇದ್ದೀರಿ ಕಾಣ್ರಿ. ನನ್ನ ಕಣ್ಣಿಗೇ ಮಣ್ಣೆರಚ್ತಾರೆ. ಅಬ್ಬ! (ಹತ್ತಿರಕ್ಕೆ ಬಂದು ಪ್ರೀತಿಯಿಂದ ಅವನ ಬೆನ್ನನ್ನು ತಡವಿ) ಅದರ ಮಾತಿರಲಿ. ಆಮೇಲೆ ವಿಚಾರಿಸಿಕೋತೀನಿ. ನೀವು ಸ್ಮಾರ್ತರಾದ್ರೂ, ನಾನು ಗೃಹಿಣಿಯಾದ್ರೂ ಎರಡೂ ಒಂದೇ.

**ರಂಗರಾಯ.**—ಓ ಭೇಷಕ್, ನೀನು ಒಳ್ಳೇ ಗೃಹಿಣಿ. ನಾನು ಸೊಗಸಾದ ಸ್ಮಾರ್ತ. ನಾವಿಬ್ಬರೂ ಸರಿಯಾದ ಜೋಡಿ.

**ಯಶೋದಮ್ಮ.**—ಇದೇನೂ ಅಂದರೆ ಹೀಗಂತೀರಿ? ನನಗೆ ಅಡಿಗೆ ಮಾಡುವುದೇ ಬರೋಲ್ಲ. ಗೃಹಿಣೀ ಅಂತೀರಿ?

**ರಂಗರಾಯ.**—ಇಷ್ಟು ಸಣ್ಣ ವಿಚಾರ ಗೊತ್ತಿಲ್ಲವೆ? ಓದು ಬಂದ ದೊಡ್ಡಮನುಷ್ಯರ ಮಕ್ಕಳಿಗೆ ಅಡಿಗೆ ಮಾಡೋಕೆ ಬರಲೇ ಬಾರದು. ಬಂದರೆ, ಅದೇ ಒಂದು ದೊಡ್ಡ ಅವಮಾನ. ಒಂದು ದೊಡ್ಡ disqualification. ಅಡಿಗೆ ಮನೇಲಿ ಇಂಗಾಲಾಮ್ಲ ಕುಡಿದರೆ, ಅವರ ಗುಲಾಬಿ ಬಣ್ಣದ ಕೆನ್ನೆಗೆ ಟಾರಿನ ಬಣ್ಣದ ಕಪ್ಪುವೋರೆ ರೋಗ ಬಂದು ಬಿಡುತ್ತೆ.

**ಯಶೋದಮ್ಮ.**—ನೀವು ಸೂರ್ಯಕಾಂತಿ ಹೂ. ಹೊತ್ತು ತಿರುಗಿದ ಹಾಗೆ ತಿರುಗೋರು.

**ರಂಗರಾಯ.**—ಅದು ನೀನು ಮಾಡಿದ್ದೇ, dear.

**ಯಶೋದಮ್ಮ.**—(ಅವನ ಸಮೀಪದಲ್ಲಿ ಕುರ್ಚಿಯಮೇಲೆ ಕುಳಿತು) ನಿಮ್ಮಂಥ ಸ್ಮಾರ್ತರಿದ್ದ ಮೇಲೆ ಪ್ರಪಂಚವೇ ಉದ್ಧಾರವಾಯ್ತು. ಶಂಕರ ಜಯಂತಿಗೆ ಚಂದಾ ಕೊಡೋದಿಲ್ಲ ಅಂದಿರಿ. ಸರಿಯೋರೆದುರಿಗೆ ಮಾನಾ ಏನಾಗ್ಬೇಕು ? ದೊಡ್ಡೋರೆಲ್ಲಾ ಸೇರಿದ್ದಾರಂತೆ. ನಿಮ್ಮ ರುಮಾಲಿನ ಜರತಾರಿ ತಾನೆ ಕಡಿಮೆಯಾಗಿದೆಯೆ ? ಲತೀಫ್ ಒಳಗಿನಿಂದ ಬರೋದರೊಳಗೇ "ಯಜಮಾನರು ಬಹಳ busy ಆಗಿದಾರೆ" ಅಂತ ನಾನು ಹೇಳಿದೆ. ಚಂದಾಪಟ್ಟಿ ಅಂದಾಜು ನೋಡಿ ಗಂಟು ನೆಂಟು ಎರಡೂ ಉಳಿಯೋಹಾಗೆ ಚಂದಾಕೊಟ್ಟು, ನಿಮ್ಮ ಹೆಸರೂ ನಾನೇ ಸೈನ್‌ಮಾಡಿ ಕಳುಹಿಸಿಬಿಟ್ಟೆ. ನೀವು ಅದಕ್ಕಾಗಿ ನನಗೆ present ಕೊಡಬೇಕು. ನನ್ನ pocket money ಕೊಟ್ಟಿದ್ದೀನಿ. ಇಲ್ಲದೆ ಹೋಗಿದ್ದರೆ, ನನ್ನ friends ಎದುರಿಗೆ ಮಾನವೇ ಉಳೀತಾ ಇರಲಿಲ್ಲ. "ನಿಮ್ಮ ಗಂಡ ಹಾಗೆ, ಹೀಗೆ," ಅಂತ ಅವರೆಲ್ಲಾ ನನ್ನ ಗೇಲಿಮಾಡಿ ಗುಲ್ಲೆಬ್ಬಿಸಿ ಬಿಡ್ತಾ ಇದ್ದರು.

**ರಂಗರಾಯ.**—Many thanks, my dear. ಈಗ ಹೇಳೇ ಯಶೋದ ! ನಾನು pocket money ಮೊದಲುಗೊಂಡು ನಿನಗೆ ಯಾವುದರಲ್ಲಿ ಕಡಿಮೆಮಾಡಿದ್ದೇನೆಯೆ ? ನೀನು ಥೇಟ್ ಆಫೀಸರ ಹೆಂಡತಿ ಹಾಗೆ ಇಲ್ಲವೇನೆ ? ನೀನು ಆಫೀಸರ ಮಗಳು ಅನ್ನೋ ಪ್ರತಿಷ್ಠೆ ಇನ್ನುಮೇಲಾದರೂ ಬಿಡ್ತೀಯೋ ಇಲ್ಲವೆ ?

**ಯಶೋದಮ್ಮ.**—ನೋಡಿದರೋ, ಆಗಲೇ ಮೇಲಕ್ಕೇರಿಬಿಟ್ಟಿರಿ. ಅಬ್ಬ ! ಈ ಗಂಡಸರೇ ಹೀಗೆ. ನೋಡಿಕೊಂಡು ಬನ್ನಿ. F.A. ಪರೀಕ್ಷೇಲಿ ನಿಮ್ಮಷ್ಟು ಸಲ ಫೇಲಾದೋರು ಎಷ್ಟು ಜನ ಆಫೀಸರು ಇದ್ದಾರೇ ಅಂತ ನೋಡಿ ಬನ್ನಿ.

**ರಂಗರಾಯ.**—ನಾನು ಫೇಲಾದರೆ ನಿನ್ನ ಗಂಟು ಹೋದದ್ದೇನು? ಈ ಸಾರಿ ಮಗ ಬಿ.ಎ. ಪರೀಕ್ಷೆಗೆ ಹೋಗ್ತಾನೆ. ಅಪ್ಪ ಎಫ್.ಎ. ಪರೀಕ್ಷೇಲಿ ಫೇಲಾದ್ದಕ್ಕೆ ಆಕ್ಷೇಪಿಸೋದು ಇನ್ನೂ ತಪ್ಪಬೇಡವೆ?

**ಯಶೋದಮ್ಮ.**—ಅದು ಹ್ಯಾಗೆ ತಪ್ಪಬೇಕು? ನಾನು ಇಂಗ್ಲಿಷ್ ಕಲೀತಾ ಇದ್ದೆನಲ್ಲ. ಆಗ ಎಷ್ಟು ಜನ ಹಾಳು ಹೆಂಗಸರು ಹಾಸ್ಯ ಮಾಡಿದರೂ ಅಂತೀರಿ? ಅದಕ್ಕೇ ನಾನು ಹೆಚ್ಚಾಗಿ ಕಲೀದೇ ನಿಲ್ಲಿಸಿ ಬಿಟ್ಟೆ. ಈ ಹಾಳು ಹೆಂಗಸರು "ಗಂಡ ಬಿ.ಎ., ಎಂ.ಎ., ಎತ್ತು, ಕೋಣ ಎಲ್ಲಾ ಪ್ಯಾಸೂ ಮಾಡಿದಾನೆ. ಅವನಿಗೆ ಅಂಗಳದಿಂದ ಹಿಡಿದು ಅಡಿಗೇಮನೇ ವರೆಗಿನ ಎಲ್ಲಾ ಡಿಸ್ಟ್ರಿಕ್ಟುಗಳ ಮೇಲೂ ಅಧಿಕಾರ. ಅಷ್ಟು ದೊಡ್ಡ ಹುದ್ದೇದಾರನ ಹೆಂಡತಿ ಇಂಗ್ಲಿಷ್ ಕಲೀಬೇಡವೆ?" ಅಂತ ಹೀಯಾಳಿಸಿದ್ದು ನನ್ನ ಕಿವಿಗೇ ಬಿದ್ದಿದೆ. ನೀವೂ ಪ್ಯಾಸುಮಾಡಿ ನಮ್ಮಪ್ಪನ ಹಾಗೆ ಅಧಿಕಾರ ಮಾಡಿದ್ದರೆ ನನ್ನ ಮನಸ್ಸಿಗೆ ಹೇಗಿರ್ತಿತ್ತು ನೋಡಿ! ನೀವು ಬಹಳ ಓದಿ ಮುಂದಕ್ಕೆ ಬರ್ತೀರಿ ಅಂತ ನಮ್ಮಪ್ಪ ಬಾಯಿ ಬಾಯಿ ಬಿಟ್ಕೊಂಡಿದ್ದ.

**ರಂಗರಾಯ.**—ಹಾಗಲ್ಲವೇ ಯಶೋದ! ನಮ್ಮಪ್ಪನೂ ದೊಡ್ಡ ಅಧಿಕಾರ ಮಾಡಿದ. ನಿಮ್ಮಪ್ಪನೂ ದೊಡ್ಡ ಅಧಿಕಾರಮಾಡಿದರು. ನೀನೂ ದೊಡ್ಡ ಅಧಿಕಾರಮಾಡಲಿಲ್ಲ. ನಾನೂ ದೊಡ್ಡ ಅಧಿಕಾರಮಾಡ ಲಿಲ್ಲ. ಅಲ್ಲಿಗಲ್ಲಿಗೆ ಸರಿಯೋ ಇಲ್ಲವೋ?

**ಯಶೋದಮ್ಮ.**—ಇದೂ ಸರಿ ಅಂದರೆ. ನಾನು ಹೆಂಗುಸು. ನಾನೂ ಒಂದೇ, ನೀವೂ ಒಂದೇನೇ?

**ರಂಗರಾಯ.**—ಗಂಡಸರೂ ಹೆಂಗುಸರೂ ಸಮ ಅಂತ ಎಲ್ಲದ ರಲ್ಲಿಯೂ ನನ್ನ ಕಿರುಗುಟ್ಟಿಸಿ ಬಿಡ್ತೀಯೆ. ಇದರಲ್ಲಿ ಮಾತ್ರ ಹೀಗೇಕೆ ವ್ಯತ್ಯಾಸ? ಹೋಗಲಿ. ನೀನು ಆಫೀಸರ ಹೆಂಡತೀರಿಗಿಂತ ಯಾತರಲ್ಲಿ ಕಡಮೆ? ಅದು ಹೇಳು ಮತ್ತೆ.

**ಯಶೋದಮ್ಮ.**—ನನ್ನ ಯಾಕೆ ಕೆರಳಸ್ತೀರಿ ಅಂದರೆ? ಏನಾದ ರೇನ್ರಿ, ಏನಿದ್ದರೇನ್ರಿ, ಆ ಸೊಗಸು ಬಂದೀತೆ? "ಯಾರೋ ಅಲ್ಲಿ?"

ಅಂದ ತಕ್ಷಣ, ದವಾಲೀ ಜವಾನರು, "ಅವ್ವ, ಅವ್ವ, ನಾನ್ರು, ನಾನ್ರು" ಅಂತ ಬಂದರೆ ಅದರ ಸೊಗಸೇ ಬೇರೆ. ಅದರ ಠೀವಿಯೇ ಬೇರೆ.

**ರಂಗರಾಯ.**—ಲತೀಫ್ ಇಲ್ಲವೆ ?

**ಯಶೋದಮ್ಮ.**—ಅವನಿಗೆ ದವಾಲೀ ಇದೆಯೆ ?

**ರಂಗರಾಯ.**—ಅಯ್ಯೋ, ಅದೊಂದು ಕಷ್ಟವೇನೆ? ನೀನು serious ಆಗಿ ಹೇಳಿದರೆ, ಅದನ್ನೂ ಇವತ್ತು ಸಂಜೆಗೇ ಮಾಡಸ್ತೀನಿ. ಹೋಟಲು ಜವಾನರಿಗೆ ಕೂಡ ಕೆಲವು ಕಡೆ ದವಾಲೀ ಇದೆ. ನಾವೂ ಒಂದು ಹಾಕಿಸಿದರಾಯಿತು.

**ಯಶೋದಮ್ಮ.**—ನೀವು ಹಾಕಿಸಿದರೇ ಆದೀತೆ? ಉಪಾಕರ್ಮದ ದಿನ ಹುಡುಗರು ಕಳ್ಳ ಜನಿವಾರ ಕೊರಳಿಗೆ ಹಾಕ್ಕೊಂಡರೆ ಬ್ರಾಹ್ಮಣ್ಯ ಬರುತ್ತೆಯೆ ಅವರಿಗೆ?

**ರಂಗರಾಯ.**—(ಸ್ವಗತ) ಏನು ಲಾಟಿಸಿಬಿಡ್ತಾಳಪ್ಪ. (ಪ್ರಕಾಶ) ಭೇಷ್, ಭೇಷ್, ಎಂಥ simile! ಎಂದು ನೋಡಿದ್ದೆಯೋ ಏನೋ! ಈ dirty customs ಎಲ್ಲಾ ಇನ್ನೂ ನಿನಗೆ ಜ್ಞಾಪಕ ಇದೆಯಲ್ಲಾ!

**ಯಶೋದಮ್ಮ.**—ನೀವು ಬ್ರಾಹ್ಮಣರು ಕೇಡು ಕೆಟ್ಟಷ್ಟು ಯಾರೂ ಕೇಡು ಕೆಟ್ಟಿಲ್ಲ ನೋಡಿ. ಅದಕ್ಕೇ ಇತರರೆಲ್ಲರೂ ಈಗ ನಿಮ್ಮನ್ನ ಬಯ್ಯೋದು. ಅದು ನ್ಯಾಯ.

**ರಂಗರಾಯ.**—ಬ್ರಾಹ್ಮಣರೂ ಅನ್ನೋದರಲ್ಲಿ ನೀನೂ ಸೇರಿದೆ ಯಲ್ಲ. ನಾವು ಕೇಡು ಕೆಟ್ಟಷ್ಟು ಅನ್ನು. ನೀವು ಕೇಡು ಕೆಟ್ಟಷ್ಟು ಅಂತ ಗಂಡಸರಿಗೆ ಮಾತ್ರವೇ ಏಕೆ ಬೈಗಳ?

**ಯಶೋದಮ್ಮ.**—ನಾವು ಅಬಲೆಯರಾದ ಅರ್ಧಾಂಗಿಯರು. ನೀವು ನಮ್ಮನ್ನೂ ಮುಳುಗಿಸಿ ನೀವೂ ಮುಳುಗ್ತಾ ಇದ್ದೀರಿ. ನಿಮ್ಮಿಂದಲೇ ನಾವು ಹೀನಸ್ಥಿತಿಗೆ ಬಂದದ್ದು. ಹೆಂಗಸರನ್ನು ತುಳಿದುಬಿಟ್ಟಿದ್ದೀರಿ.

**ರಂಗರಾಯ.**—ಈಗ ಹೆಂಗಸರಿಗೆಲ್ಲಾ ಗಂಡಸರನ್ನ ದೂಷಿಸೋ ರೋಗ ಬಂದಿದೆ. ಇದಕ್ಕೆ ನಿಜವಾದ ಕಾರಣ ಕಂಡುಹಿಡಿಯೋ research

ಯಾರೂ ಮಾಡಿಲ್ಲ. ಈ ರೋಗಕ್ಕೆ ಕಾರಣ ಕಂಡುಹಿಡಿದು ಔಷಧ ಹೇಳೋ ಮಹಾನುಭಾವ, ಆ ಧನ್ವಂತ್ರಿ ಅಪ್ಪ, ಯಾವಾಗ ಅವತಾರ ಮಾಡ್ತಾನೋ ಕಾಣೆ.

**ಯಶೋದಮ್ಮ.**—ಹಾಗಾದರೆ ನಿಮ್ಮ ತಲೆಕೆಳಕು ಲೆಕ್ಕಾಚಾರದಲ್ಲಿ ಮಗನ ಅವತಾರವಾದ ಮೇಲೆ ಅಪ್ಪನ ಅವತಾರವೋ?

**ರಂಗರಾಯ.**—(ನಗುತ್ತಾ) ನೀನು ಸರಸ್ವತಿ ಅಂಶ ಕಣೆ. ನಾನು ಬಾಯಿತಪ್ಪಿ ಮಾತನಾಡಿದರೂ ಬೇಸ್ತು ಕೆಡವಿಬಿಡ್ತೀಯೆ.

**ಯಶೋದಮ್ಮ.**—ಈ ಮಾತು ಹೋಗಲಿ. ಒಡವೆ ಯಾವಾಗ ಬರುತ್ತೆ ಹೇಳಿ. ಎರಡು ದಿನದಿಂದ ಹೇಳಿಕಳುಹಿಸಿದರೂ ಒಪ್ಪಾಹಾಕಿಲ್ಲಾ ಅಂತ ಹೇಳ್ತಿದ್ದಾನೆ. ಅವನೇನು ಗಂಗಾನದಿ ಮರಳು ತರಿಸಿ ಒಪ್ಪಾ ಹಾಕ್ಬೇಕೋ, ಇಲ್ಲ ಮರಳಿಗೂ ಲಂಡನ್ನಿಗೇ ಬರೆದಿದ್ದಾನೋ? ನನ್ನ ಕೆಲಸಗಳು ಒಂದರಲ್ಲೂ ನಿಮಗೆ ಮುತುವರ್ಜಿಯಿಲ್ಲ. ನನಗೆ ನಾಳೆ ಅದು ಬೇಕೇ ಬೇಕು. ನೀವು ಇನ್ನೊಂದು ಕೆಟ್ಟ ಪದ್ಧತಿ ಬಿಟ್ಟುಬಿಡಬೇಕ್ರಿ. ಏನೆ, ಕಣೆ, ಗಿಣೆ, ಅಂತ ಮಾತನಾಡಬೇಡ್ರಿ ಇನ್ನು ಮೇಲೆ. ಎಷ್ಟೋ ಸಲ ಹೇಳಿದ್ದೀನಿ. ನೀವು......

**ರಂಗರಾಯ.**—ನನ್ನ ಪ್ರೀತಿ ಅಂತರಾನೇ ನಿನಗೆ ತಿಳೀಲಿಲ್ಲ. ಇಂಗ್ಲೆಂಡಿನಲ್ಲಿ ಹೆಂಡತೀರನ್ನ ಕೆಲವರು chick ಅಂತ ಕರೀತಾರಂತೆ. ಅಲ್ಲಿ ಹೆಂಗಸರು "ಕೋಳೀಮರಿ ಅಂತೀರಾ?" ಎಂತ ಗಂಡಂದಿರ ಕೈಯಲ್ಲಿ ಜಗಳ ಆಡಿದ್ದು ಯಾವ ಪೇಪರಿನಲ್ಲೂ ಬಂದಿಲ್ಲ. ಅದಿರಲಿ. ನೀನೇಕೆ ನನ್ನ ಘಾಟಿ ಅಂದದ್ದು?

**ಯಶೋದಮ್ಮ.**—ರೀ, ರೀ, ನಿಮ್ಮ ಪ್ರೀತಿ ಅಂತರಾಟದಲ್ಲಿದೆ ಕಾಣ್ರಿ. ಅದು ನಾನು ಬಲ್ಲೆ. (ಹುಸಿನಗೆಯಿಂದ) ಮೆಂಬರು ಸಾಹೇಬರೆ, ಹೆಂಗಸರ ಸ್ವಾತಂತ್ರ್ಯಕ್ಕೋಸ್ಕರ ಸಭೇಲಿ ಹೊಡೆದಾಡಬೇಕು. ಮೈಸೂರು ಸೀಮೇಲಿ ಅಷ್ಟಾದರೂ ಸಾಧಿಸಿ, ಇಂಡಿಯಾದೇಶಕ್ಕೆ ಮೇಲು ಪಂಕ್ತಿಹಾಕಿ ಮತ್ತೆ. ಎಲ್ಲೆಲ್ಲೂ ನಿಮ್ಮ ಕೀರ್ತಿ ಹಬ್ಬಿದರೆ, ನೀವು ಆಫೀಸರಾಗಲಿಲ್ಲವಲ್ಲಾ ಅನ್ನೋ ಕೊರಗು ನನಗೆ ಅದರಿಂದಲಾದರೂ ತಪ್ಪುತ್ತೆ.

ಹೀಗೆ ಮಾಡ್ತೀರೋ, ಇಲ್ಲ ಸಭೆಗೆ ಹೋದಮೇಲೆ ಮೂಗಿಲಿಯಾಗಿ ಹಿಂದಕ್ಕೆ ಬಂದುಬಿಡ್ತೀರೋ. ನನಗೇನೋ ನಿಮಗೆ ಮೆಂಬರಾಗೋ ಇಷ್ಟವಿರೋದನ್ನ ನೋಡಿ ಟಾನಿಕ್ ಕೊಟ್ಟ ಹಾಗೆ ಆಗಿದೆ. ಕೊನೆಗೆ ಇಷ್ಟಾದರೂ ಒಳ್ಳೇದು ಕಂಡೆನಲ್ಲಾ ಅಂತ ಸಂತೋಷವಾಗಿದೆ. ಇದು ಹೇಳದೆ ಮರೆಮಾಚಿ ಹೆಸರು ವೈಷ್ಣವರ ಹಾಗಿದೆ ಅಂತ ಬುರುಡೆ ಬಿಟ್ಟಿರಲ್ಲಾ, ಅದಕ್ಕೋಸ್ಕರ ಘಾಟೀ ಅಂದೆ.

**ರಂಗರಾಯ.**—ಹೌದೇ, ಗಾಳಿ ಯಾವ ಕಡೆಗಿದೆಯೋ ಅಂತ ನಿನ್ನ mood ನೋಡಿಕೊಂಡು ತಾನೆ ನಾನು ಮಾತನಾಡಬೇಕು. (ಉತ್ಸಾಹದಿಂದ ಉಬ್ಬಿ) ನಾನು ಮೂಗಿಲಿ ಹಾಗೆ ಹಿಂದಕ್ಕೆ ಬರ್ತೇನೆಯೋ ಏನೋ ಅಂದೆಯಲ್ಲಾ. ಅಲ್ಲಿ ಹೋಗಿ ಕೂತಮೇಲೆ ನೋಡು ನನ್ನ ಸೊಗಸ. ಅದಿರಲಿ. ಈ ವಿಚಾರ ನಾನು ಬಗೆಹರಿಸಿದ್ದು ಇಷ್ಟು ಬೇಗ ನಿನಗೆ ಹೇಗೆ ತಿಳೀತು?

**ಯಶೋದಮ್ಮ.**—"ನಿಲ್ಲಲೋ, ಬೇಡವೋ," ಅಂತ ತೊಳಲಿ ಬಳಲ್ತಾಲೇ ಇದ್ದಿರಿ. ಇಷ್ಟಕ್ಕೂ ನನಗೇನು ಕಿವಿಯಿಲ್ಲವೆ? ಮನೆಯೇ ಕಿತ್ತು ಹಾರಿಹೋಗೋ ಹಾಗೆ ಕೂಗಾಡ್ತಾ ಇದ್ದಿರಿ. ನಾನು ಪಕ್ಕದ ರೂಂನಲ್ಲಿ ಕೂತು ಕಿವಿಗೊಟ್ಟು ಕೇಳ್ತಾ ಇದ್ದೆ.

**ರಂಗರಾಯ.**—ಏನೇ ಯಶೋದ! ಇಷ್ಟು culture ಇದ್ದೂ ಹೊಂಚು ಕೇಳೋದೆ?

**ಯಶೋದಮ್ಮ.**—ಹೊಂಚು ಕೇಳಿದೋರ್ಯಾರು? ಅರ್ಧ ಶರೀರ ಮಾತಾಡ್ತಾ ಇತ್ತು. ಅರ್ಧ ಶರೀರ ಕೇಳ್ತಾ ಇತ್ತು. ಅದರಲ್ಲೇನು ತಪ್ಪು?

**ರಂಗರಾಯ.**—ನಾನು ಎಲೆಕ್ಷನ್ನಿಗೆ ನಿಲ್ಲೋ ವಿಷಯದಲ್ಲಿ ನಿನ್ನ idea ಏನು?

**ಯಶೋದಮ್ಮ.**—ಎಷ್ಟು ಸಲ ಹೇಳಬೇಕು ನಿಮಗೆ? ನೀವು ಅನುಮಾನದ ಗೊಂದಲದಲ್ಲಿದ್ದಾಗಲೇ ಹೇಳಿದ್ದೇನಲ್ಲ splendid ಅಂತ. ನಾನು ಹೇಳಿದ ಹಾಗೆ ಮಾತ್ರ ಮಾಡಿಬಿಡಿ. ಹೆಂಗಸರ ಸ್ವಾತಂತ್ರ್ಯಕ್ಕೆ

ಹೋರಾಡಿ, ನಾವೂ ಅಲ್ಲಿ ಮೆಂಬರಾಗೋ ಹಾಗೆ ಮಾಡಿಬಿಡಿ. ನಾವಿಬ್ಬರೂ ಮೆಂಬರಾಗಿ ಕೂತು, **ಪೂರ್ವಾಚಾರಕ್ಕೆ** ಹೊಡೆದಾಡೋರಿಗೆ ಗ್ರಹಚಾರ ಬಿಡಿಸಿಬಿಡೋಣ.

**ರಂಗರಾಯ.**—Good. ಇದ್ದರೆ ಇಂಥ ಹೆಂಡತಿ ಇರಬೇಕು. ಮಗು ಎಲ್ಲಿ? ಅವನಿಂದ ಒಂದು ಕೆಲಸವಾಗಬೇಕಾಗಿದೆ.

**ಯಶೋದಮ್ಮ.**—ಆ ರಾಮಚಂದ್ರನ್ ಅನ್ನೋನ್ನ ಬುಟ್ಟೀಗೆ ಹಾಕೋದೇನೊ? ಕಿಟ್ಟು ಎಲ್ಲೋ ಹಾಸ್ಟೆಲ್ ಕಡೆಗೋ, ಹೋಟಲ್ ಕಡೆಗೋ ಹೋಗಿದ್ದಾನೇನೋ. ಭಾನುವಾರ ಬಂತೂ ಅಂದರೆ ಬೀದಿ ಅಲೆಯೋದು ತಾನೇ ಕೆಲಸ! ಹೀಗಾದರೆ ಹ್ಯಾಗೆ ಪ್ಯಾಸಾಗುತ್ತೋ ಕಾಣೆ, ಆ ಮುವ್ವತ್ತಾರು ರೂಪಾಯಿನ ಪರೀಕ್ಷೆ. ಏನೋ ಒಬ್ಬ ಮಗ. ಅವನು I. C. S. ಪ್ಯಾಸ್ಮಾಡಿ, ಮನೇ ಉದ್ದದ ಕುದುರೆ ಮೇಲೆ ಕೂತು, ಬ್ರೀಚಸ್ ಹಾಕಿರೋ ಕಾಲು ರಿಕಾಪಿನಲ್ಲಿ ಬೀಸ್ತಾ ನನ್ನೆದುರಿಗೆ ಬಂದು ನಿಂತುಕೊಂಡುಬಿಟ್ಟರೆ ನಾನು ಗೆದ್ದೆ.

**ರಂಗರಾಯ.**—ಅಬ್ಬ! ಹೇಳು, ಹೇಳು. ಹ್ಯಾಟು, ಸಿಗರೇಟು ಬಿಟ್ಟುಬಿಟ್ಟೆಯಲ್ಲೇ ಯಶೋದ!

**ಯಶೋದಮ್ಮ.**—ಅದೂ ಆಗಲೇಳಿ. ಸಿಗರೇಟಂತೆ ಸಿಗರೇಟು. ಹೇಳೋದರಲ್ಲೂ nobility ಬೇಡವೇ? ಲಕ್ಷಣವಾಗಿ ಸಿಗಾರ್ ಅನ್ನಿ. ಹಾಸ್ಯ ಮಾಡ್ತಾರೆ ಮಗೂನ. **(ಅರ್ಧ ಪ್ರೀತಿ, ಅರ್ಧ ಹಾಸ್ಯದ ನೋಟದಿಂದ ರಂಗರಾಯನ ಮುಖವನ್ನು ನೋಡುತ್ತ)** ಇಷ್ಟು ಚಿಕ್ಕವಯಸ್ಸಿಗೇ ಬಿ.ಎ. ಕ್ಲಾಸಿಗೆ ಬಂದು ತಂದೆಯ ಮುಖದ ಮೇಲೆ ಬಡಿಯೋ ಹಾಗೆ ಓದಿಬಿಟ್ಟನಲ್ಲಾ ಅಂತ ಮಗನ ಮೇಲೂ ಇವರಿಗೆ ಹೊಟ್ಟೇಕಿಚ್ಚೋ ಏನೊ! ಅವನು ನಿಮ್ಮನ್ನಾಗಲಿ, ನಿಮ್ಮ ಕಡೆಯೋರನ್ನಾಗಲಿ ಹೋತಿಲ್ಲ, ಕಂಡಿರಾ. ನನ್ನೂ, ನಮ್ಮ ಕಡೆಯೋರನ್ನೂ ಹೋತಿದಾನೆ. ಮುಂದಕ್ಕೆ ಬಂದೇ ಬರ್ತಾನೆ.

**ರಂಗರಾಯ.**—ಬರಲಿ. ನನಗೂ ಸಂತೋಷ. ಅಲ್ಲವೇ ಯಶೋದ, ನೀನು ಒಂದು ಕ್ಷಣದಲ್ಲಿ ಅರ್ಧಾಂಗಿ ಅಂತೀಯೆ. ಮರುಕ್ಷಣದಲ್ಲಿಯೇ ನಾನೇ ಬೇರೆ, ನೀನೇ ಬೇರೆ, ಅನ್ನೋಹಾಗೆ ಮಾತನಾಡ್ತೀಯೆ. ನೀನು

ಏನೇ ಹೇಳು, ಕಿಟ್ಟು ಮೂಗು ನನ್ನ ಮೂಗಿನಹಾಗೇ ಇದೆ. ಅದೇ ತದ್ರೂಪು. ಅದೇ ಫೋಟೊ.

**ಯಶೋದಮ್ಮ.**—ಅವನಿಗೆ ಎಸಳಾಗಿದೆ ಮೂಗು, ನನ್ನ ಮೂಗಿನ ಹಾಗೆ. ನಿಮ್ಮ ಹಾಗೆ ದೊಡ್ಡ ದೊಣ್ಣೆ ಮೂಗೇನೂ ಅಲ್ಲ ಕಂಡಿರಾ? (ನಗುತ್ತ) ಅವನು ಆಫೀಸರಾದರೆ ಹ್ಯಾಟ್ ತಗಲಿ ಹಾಕೋಕೆ ನಿಮ್ಮ ಮೂಗು ಸೊಗಸಾಗಿದೆ ನೋಡಿ.

**ರಂಗರಾಯ.**—ಸ್ವಲ್ಪ ನಿನ್ನ ಕಿವಿ ಮುಟ್ಟಿ ನೋಡಿಕೊ. ಆಮೇಲೆ ಮಾತಾಡು. ಗೌರಮ್ಮನ ಪೂಜೇದಿನ ಮೊರದ ಬಾಗಿನಕ್ಕೆ ಮೊರಗಳು ಸಿಕ್ಕದೇ ಹೋದರೆ ಅವೇ ಸಾಕು.

**ಯಶೋದಮ್ಮ.**—(ನೇಪಥ್ಯದ ಕಡೆಗೆ ದೃಷ್ಟಿಸಿ ನೋಡಿ) ಅಗೋ! ಕಿಟ್ಟು ಬಂದೇಬಿಟ್ಟ! ಇಷ್ಟು ಬೇಗ ಮನೆಗೆ ಬಂದಿದ್ದಾನೆ. ಇವತ್ತು ಮಳೆ ಬರೋದು ಖಂಡಿತ. ಮಗು ಹೇಗಿದಾನೆ ನೋಡೀ ಅಂದರೆ!

**ರಂಗರಾಯ.**—ಮಳೆಯೇ ಇಲ್ಲ. ಸದ್ಯ ಇದರಿಂದಲಾದರೂ ಮಳೆ ಬರಲಿ.

**ಕೃಷ್ಣಮೂರ್ತಿ.**—(ಪ್ರವೇಶಿಸಿ) What father! ನಾನು ಹೇಳಿದ್ದು ಏನು ಮಾಡಿದೆ?

**ರಂಗರಾಯ.**—ನನಗೆ ಈ ದಿವಸ ಅವಕಾಶವಿಲ್ಲಪ್ಪ, ಕಿಟ್ಟು. ನಾಳೆ ಖಂಡಿತವಾಗಿ ದಂಡಿಗೆ ಹೋಗಿ ಸೊಗಸಾದ ಸೂಟ್ ಹೊಲಿಯುಹಾಕೋಣ. ಅಷ್ಟೊಂದು ಸೂಟ್ಸ್ ಇಟ್ಟುಕೊಂಡಿದ್ದೀಯೆ. ಒಂದು ದಿನದಲ್ಲೇನಪ್ಪ, ಅವಸರ? ಅದಿರಲಿ........ನೀನೊಂದು ಕೆಲಸಮಾಡಬೇಕು. ಯಾರೋ ರಾಮಚಂದ್ರನ್ ಎನ್ನೋ ಹುಡುಗ ನಿನ್ನ ಜೊತೆಯಲ್ಲಿ ಓದುತ್ತಿದ್ದಾನಂತಲ್ಲ. ಅವನಿಂದ ಸ್ವಲ್ಪ ಜರೂರು ಕೆಲಸವಾಗಬೇಕಾಗಿದೆ. ಈಗಲೇ ಹೋಗಿ ಅವನನ್ನು ಕರೆದುಕೊಂಡು ಬಾ. ನಿನ್ನ ಕೆಲಸಕ್ಕೆ ನಾಳೆ ಖಂಡಿತ ದಂಡಿಗೆ ಹೋಗೋಣ.

(ಕೃಷ್ಣಮೂರ್ತಿಯು ಹೋಗುವನು. ತೆರೆಯು ಬೀಳುವುದು.)

---

## ಎರಡನೆಯ ಅಂಕ

### ದೃಶ್ಯ ೧

[ರಂಗರಾಯನ ಮನೆ. ಕೃಷ್ಣಮೂರ್ತಿ, ರಾಘವೇಂದ್ರರಾಯ, ನಾರಾಯಣಶಾಸ್ತ್ರಿ, ರಾಮಚಂದ್ರ ಈ ನಾಲ್ಕು ಜನರೂ ಕುರ್ಚಿಗಳ ಮೇಲೆ ಕುಳಿತು ಮಾತನಾಡುತ್ತಿರುವರು.]

**ಕೃಷ್ಣಮೂರ್ತಿ.**—ಲೋ, ಲತೀಫ್, ಲತೀಫ್.

**ಅಬ್ದುಲ್ ಲತೀಫ್.**—(ಪ್ರವೇಶಿಸಿ) ಛೋಟಾ ಯಜಮಾನ್‌ಕು ಸಲಾಂ, ಸಲಾಂ, ಸಲಾಂ ಸಾಮಿ.

**ಕೃಷ್ಣಮೂರ್ತಿ.**—ಲತೀಫ್! ಕಾಫೀ ಆಯಿತೇನೋ? ಸೀಸಪ್ಪ ಕೊಟ್ಟನೋ ಇಲ್ಲವೊ? ನಾನು ಬಹಳ ದೂರ ಕಳಿಸಿದ್ದೆ ನಿನ್ನ.

**ಅಬ್ದುಲ್ ಲತೀಫ್.**—ಕೊಟ್ಟ, ಖಾವಿಂದ್ ಕೊಟ್ಟ. ಯಾವಾಗ ಲಾದರೂ ಒಂದೊಂದು ದಿನ ಅವನು, ಬಹುತ್ ಅಚ್ಛ ನೋಡಕೊಳ್ತಾದೆ ಸಾಮಿ, ನೀವು ಹೇಳಿದ್ದರೆ. ಮೊಹರಂ ಇನಾಂ, ದಸರಾ ಇನಾಂ, ಸಾಮಿ ಕೊಡ್ಲೇ ಇಲ್ಲ.

**ಕೃಷ್ಣಮೂರ್ತಿ.**—ಅದಕ್ಕೇನೊ, ಕೊಡ್ತೇನೆ. ನೀನು ಬಾಗಿಲ ಹತ್ತಿರವೇ ಇದ್ದು ಯಜಮಾನರು ಬರೋ ಸುಳು ಕಂಡ ತಕ್ಷಣ ನಮಗೆ ತಿಳಿಸಬೇಕು. ಗೊತ್ತಾಯಿತೊ?

**ಅಬ್ದುಲ್ ಲತೀಫ್.**—ಅಚ್ಛ ಸಾಮಿ. ಅವರು ದೂರದಲ್ಲಿ ಕಂಡೇಟಿಗೆ ಬಂದು ಜಾಹಿರ್ ಮಾಡ್ತೀನಿ.

**ಕೃಷ್ಣಮೂರ್ತಿ.**—ಹೋಗು. ಬಾಗಿಲು ಹಾಕಿಕೊಂಡು ಹೋಗು. (**ಲತೀಫ್ ಹೋಗುವನು.**) ಇನ್ನೇನಮ್ಮ, ಲೋ, ರಾಘು, ನೀನು ಇನ್ನು ಯಾವ anxietyನೂ ಇಲ್ಲದೇ ಹಾಡಬಹುದಲ್ಲ. ಇವತ್ತು ನಮ್ಮ ತಂದೆ ತಮ್ಮ ರೂಂ ನನಗೇ ಬಿಟ್ಟುಬಿಟ್ಟಿದ್ದಾರೆ. ಅವರೇನಾದರೂ ಬಂದರೆ ನಿಲ್ಲಿಸಿ ಬಿಡೋಣ. ಎಲ್ಲಿ, ಹೇಳು.

(ರಾಘವೇಂದ್ರರಾಯನು "ನೀರಜಗಂಧಿಯ ಮುಖ ನೀರೇಜವನು ಮಾರನೆ ತೋರು ಬೇಗನೆ" ಎಂಬ ಹಾಡನ್ನು ಹೇಳುವನು.)

**ನಾರಾಯಣಶಾಸ್ತ್ರಿ.**—ಏನಯ್ಯ ಭೇಷಾಗಿ ಹಾಡಿದೆ. ಕೃಷ್ಣಮೂರ್ತಿ! ಅವನು ಆಕ್ಟ್ ಮಾಡಿದ್ದು ನೋಡಿದೆಯೋ ಹೇಗಿತ್ತು? ಇನ್ನು ಸ್ವಲ್ಪ ದಿನ ಹೋದರೆ, ವರದಾಚಾರಿ ಅಪ್ಪನ ಹಾಗೆ ಆಕ್ಟ್ ಮಾಡ್ತಾನೆ.

**ರಾಮಚಂದ್ರನ್.**—ಅದೇನೋ ನಿಜ. ಇಲ್ಲ, ಇಲ್ಲ, ಈಗಲೇ ನಮ್ಮ ರಾಘು ವರದಾಚಾರಿ ಅಪ್ಪನಹಾಗೆ ಮಾಡ್ತಾನೆ.

**ಕೃಷ್ಣಮೂರ್ತಿ.**—ಈಗಲೇ ಅಷ್ಟೊಂದು claim ಮಾಡೋ ಹಾಗಿಲ್ಲ.

**ರಾಮಚಂದ್ರನ್.**—Claim ಮಾಡದೆ ಏನಂತೆ? ವರದಾಚಾರಿ ಅಪ್ಪನಿಗೆ ಆಕ್ಟ್ ಮಾಡೋದರ ಗಂಧವೇ ಇರಲಿಲ್ಲ.

(ರಾಘವೇಂದ್ರರಾಯನ ಹೊರತು, ಉಳಿದವರು ಮೂವರೂ ನಗುವರು.)

**ರಾಘವೇಂದ್ರರಾಯ.**—ರಾಮಚಂದ್ರನ್! ಕನ್ನಡದಲ್ಲಿ ಹೆಚ್ಚು ನಂಬರು ಬಂದು ನಿನ್ನ ತಲೆ ತಿರುಗಿಹೋಗಿದೆ.

**ರಾಮಚಂದ್ರನ್.**—ತಲೆ ಇದ್ದಕಡೆಯೇ ಇದೆ. ಹಾಸ್ಯಮಾಡಿದರೆ sportsman-like ಆಗಿ ಸಂತೋಷಪಡಬೇಕಯ್ಯ.

**ಕೃಷ್ಣಮೂರ್ತಿ.**—Boys, boys, we should never lose our temper and begin to quarrel with one another.

**ನಾರಾಯಣಶಾಸ್ತ್ರಿ.**—ಇವನೇನೋ ದೊಡ್ಡ ಮುದುಕನ ಹಾಗೆ ನಮ್ಮನ್ನ ಬಾಯ್ಸ್ ಅಂತಾನೆ. ನಾವೆಲ್ಲ ಹುಡುಗರು, ಇವನು ಮುದುಕ.

**ಕೃಷ್ಣಮೂರ್ತಿ.**—ಅಷ್ಟಲ್ಲದೆ ಏನಯ್ಯ? ಇಂಡಿಯಾ ದೇಶದ ಸೆನ್ಸಸ್ ಲೆಕ್ಕದ ಪ್ರಕಾರ ನಮ್ಮ ಸರಾಸರಿ ಜೀವನದ ಆಯುಸ್ಸು ಇಪ್ಪತ್ತು ವರುಷಕ್ಕಿಂತ ಸ್ವಲ್ಪ ಹೆಚ್ಚಂತೆ. ೧೯ ವರುಷ ಆದೋರೆಲ್ಲ ಮುದುಕರೇ ತಾನೆ?

**ನಾರಾಯಣಶಾಸ್ತ್ರಿ.**—ಇದು ಒಳ್ಳೆ ಯುಕ್ತಿವಾದ. Pig's logic ಎಂದರೆ ಇದೇ. ರಾಮಚಂದ್ರನ್ ಎದುರಿಗೆ ಕನ್ನಡ ಮಾತನಾಡೋಕೇ ದಿಗಿಲಾಗತ್ತಯ್ಯ.

**ಕೃಷ್ಣಮೂರ್ತಿ.**—Quite so. ಅವನು ಒಳ್ಳೆ ornament ಕಣಯ್ಯ. ನೀನೇ ಹೀಗೆಂದ ಮೇಲೆ, ಇನ್ನು ನಾನು ಫ್ರೆಂಚ್ ತೊಗೊಂಡಿರೋನು, ಏನು ಹೇಳಬೇಕೋ ತಿಳಿಯದು. ನಾನೂ ಇನ್ನುಮೇಲೆ ಸ್ವಲ್ಪ ಕನ್ನಡ ಪುಸ್ತಕಗಳನ್ನು ಓದಬೇಕಯ್ಯ.

**ನಾರಾಯಣಶಾಸ್ತ್ರಿ.**—ನೊಣದ ಮೀಸೇ ಹಾಗೇನೆ ಈಗ ಕನ್ನಡ ಪುಸ್ತಕಾನೂ ಫ್ಯಾಷನ್. ಓದಲಿ, ಬಿಡಲಿ, ಕನ್ನಡ, ಕನ್ನಡ, ಅನ್ನೋದು ಈಗಿನ ವಾಡಿಕೆ. ಮೇಜಿನ ಮೇಲೆ ಒಂದೆರಡು ಕನ್ನಡ ಪುಸ್ತಕ ಇಟ್ಟುಕೊಂಡಿರೋದು ದೊಡ್ಡಮನುಷ್ಯರ ಲಕ್ಷಣ. ಅದೊಂದು ಫ್ಯಾಷನ್.

**ಕೃಷ್ಣಮೂರ್ತಿ.**—ನೊಣದ ಮೀಸೆ ಅಂದರೇನಯ್ಯ ?

**ನಾರಾಯಣಶಾಸ್ತ್ರಿ.**—ಅದೇ ! ಮೂಗಿನ ಕೆಳಗೆ ಆ ಕಡೆಗೊಂದು ನೊಣ, ಈ ಕಡೆಗೊಂದು ನೊಣ ಕೂತಿರೋ ಹಾಗೆ ಬಿಡಿಸಿರುವ ಮೀಸೆಗೆ ನೊಣದ ಮೀಸೇ ಅಂತ ನನ್ನ definition. ಈಗ ಅದು ಇನ್‌ಫ್ಲುಯಂಜಾ ರೋಗದ ಹಾಗೆ ಹರಡ್ತಾ ಇದೆ.

(ಎಲ್ಲರೂ ನಗುವರು.)

**ರಾಮಚಂದ್ರನ್.**—ಇಲ್ಲಯ್ಯ ಶಾಸ್ತ್ರಿ, ಕೃಷ್ಣಮೂರ್ತಿ ನಿಜವಾಗಿಯೂ ಕನ್ನಡ ಪುಸ್ತಕಗಳನ್ನು ಓದಬೇಕು ಅಂತ ಮನಸ್ಸುಮಾಡಿದ್ದಾನೆ. ಅವನು ಹೇಳಿದ ರೀತಿ ನೋಡಿದರೆ ಹಾಗೆ ತೋರಿತು. I congratulate you, Mr. Krishnamurthy. ಹೀಗೆ ಭಾಷೆಯಿಂದ ತಾವು ಉದ್ಧಾರವಾಗಬೇಕೆಂದಿರುವವರಾದರೆ, ನನ್ನ ಮನಸ್ಸಿಗೆ ಒಪ್ಪಿತ. ಅದು ಬಿಟ್ಟು ತಾವೇನೋ ಭಾಷೇನೇ ಉದ್ಧಾರಮಾಡುವುದಾಗಿ ಬುಡುಬುಡಿಕೆ ಅಲ್ಲಾಡಿಸಿ ಆಯಾಸಪಡುತ್ತಾರಲ್ಲಾ, ಅವರನ್ನ ಕಂಡರೆ ಮಾತ್ರ ನನಗೆ ತಲೇನೋವು. ಸೇವೇ ಅಂತ ತಿಳಿದು ವಿನಯಶೀಲರಾಗಿ ದೇಶಸೇವೆಗೆ ಹೊರಡಬೇಕಯ್ಯ. ಆಗ ಅದರ ಫಲ. ಈಗ ನೋಡಿ, ತಿಲಕ್ ಸತ್ತ

ದಿನ, ಶವದ ಮುಂದೆ ಒಂದು ಲಕ್ಷ ಜನವಂತೆ. ಹಿಂದೆ ಒಂದು ಲಕ್ಷ ಜನವಂತೆ. "ಹಿಂದೂ ಮುಸಲ್ಮಾನ್‌ಕಿ ಜೈ" ಎಂತ ಕೂಗಿಬಿಟ್ಟೇ ಅಂದರೆ ಆಕಾಶವೇ ಒಡೆದುಹೋಗ್ತೋ ಹಾಗೆ ಶಬ್ದವಂತೆ. ಆ ಶಬ್ದ ಕೇಳಿದವರಿಗೆ ಕಿವಿಯೇ ಮುಚ್ಚಿ ಹೋಗ್ತಿತ್ತಂತೆ.

**ರಾಘವೇಂದ್ರರಾಯ.**—ಈಗೇನು ನಾವು ಸತ್ತಾಗಲೂ ಅಷ್ಟು ಜನ ಹಿಂದೇ ಮುಂದೇ ಬರೋ ಹಾಗೆ ಏರ್ಪಾಡು ಮಾಡಬೇಕೂ ಅಂತೀಯೇನು ?

**ರಾಮಚಂದ್ರನ್.**—ನಮ್ಮ ಹಿಂದೆ ಹೊರಗಿನೋರು ಎಷ್ಟು ಜನ ಬರ್ತಾರೇ ಅನ್ನೋದನ್ನು ನಿಷ್ಕರ್ಷೆಯಾಗಿ ಗೊತ್ತುಮಾಡಿದ್ದೇನೆ.

**ಉಳಿದ ಮೂವರೂ.**—(ಒಂದೇ ಉಸಿರಿನಲ್ಲಿ) ಎಷ್ಟು ಜನ, ಎಷ್ಟು ಜನ ! ಹೇಳಯ್ಯ, ಹೇಳು.

**ರಾಮಚಂದ್ರನ್.**—(ನಿಧಾನವಾಗಿ) ಒಬ್ಬರೂ ಇಲ್ಲ. ಉಳಿದವರಿಗಾದರೆ ಮನೆಯವರಾದರೂ ಹೆಣದ ಹಿಂದೆ ಬರ್ತಾರೆ. ನನ್ನ ಹಾಗೆ ತಾಯಿ, ತಂದೆ, ಅಣ್ಣ ತಮ್ಮಂದಿರು, ಒಬ್ಬರೂ ಇಲ್ಲದ ಬ್ರಹ್ಮಚಾರಿ ಹಿಂದಾದರೆ ಯಾರೂ ಬರುವ ಹಾಗಿಲ್ಲ. ಬಂದರೆ, ಮುನಿಸಿಪಲ್ ಜವಾನರು ಬರಬೇಕು. ಮುಂದೆ ಹೆಣದ ಗಾಡಿ. ಹಿಂದೆ ಮುನಿಸಿಪಲ್ ಜವಾನರು. ದೂರದ ನಂಟರೆಲ್ಲಾ ಚಕ್ಕರ್.

**ನಾರಾಯಣಶಾಸ್ತ್ರಿ.**—ಈ ರಾಮಚಂದ್ರನ್ ಮಾತಿಗೆ ಷುರು ಮಾಡಿದರೇ ಹೀಗಪ್ಪ. Tragic turn ಕೊಟ್ಟುಬಿಡುತ್ತಾನೆ.

**ರಾಮಚಂದ್ರನ್.**—ಕೊಟ್ಟಿಗೇಲಿ ರಾಗಿಹುಲ್ಲು ತಿಂದು ಬೆಚ್ಚಗಿರುವ ದನಗಳಿಗೇನು ಗೊತ್ತಯ್ಯ, ಮಳೇಲಿ ನೆಂದು ಮುದುರಿಬೀಳೋ ಬರೀ ಹೊಟ್ಟೆ ನಾಯಿನ ಸಂಕಟ ? ಹೊಟ್ಟೇಲಿ ಕಾವಿದ್ದರಲ್ಲವೇ ಬಾಯಿಂದ ಹೊಗೆ ಹೊರಟೀತು ?

**ನಾರಾಯಣಶಾಸ್ತ್ರಿ.**—ಹಾಗಾದರೆ ಬಾಯಿ ನಮ್ಮ ದೇಹಕ್ಕೆ ಚಿಮ್ನಿ ಅನ್ನು. ಅಲ್ಲಯ್ಯ, ಒಬ್ಬೊಬ್ಬರು ಹಾಗೆ ಕಷ್ಟಪಟ್ಟರೆ ಉಳಿದ ಜನರಾದರೂ ಸಂತೋಷದಲ್ಲಿರಬಾರದೆ ?

**ರಾಮಚಂದ್ರನ್.**—ಬಿಡಿಗಾಸೇ ಪಸಿವೇ ಸವರನ್ ಆಗಿರೋರ ದುಃಖ ನೋಡಿ ಸಂಕಟಪಡಬೇಕಾದರೆ ಹಳ್ಳಿಕಡೆ ಹೋಗಿ ನೋಡಬೇಕಯ್ಯ. ಪಟ್ಟಣದ slums ಕಡೆ ಸುತ್ತಾಡಿ ಬರಬೇಕಯ್ಯ. "The wearer knows where the shoe pinches" ಅಂದಹಾಗೆ ಅವರ ಸಂಕಟ, ನನ್ನ ಹಾಗೆ ದುಃಖದ ದಾವಾಗ್ನಿ ಮಹಿಮೆ ನೋಡಿರೋರಿಗೇ ಗೊತ್ತು. ಹೋಗಲಿ: ಇದೊಂದೂ ಬೇಡ. ತಿಲಕ್ ಮಾತು ಆಯಿತಲ್ಲ. ಆ ಮಹಾನುಭಾವ ಗೋಖಲೆ ಮಾತು ಹೇಳಿ. ಅಬ್ಬ! "Pure as crystal, gentle as a lamb, brave as a lion and chivalrous to a fault." ಅನ್ನಿಸಿಕೋಬೇಕಾದರೆ ಸಾಮಾನ್ಯವೆ?

**ರಾಘವೇಂದ್ರರಾಯ.**—ನಾವೆಲ್ಲಾ ಹಾಗಾದರೆ ಬ್ರಿಟಿಷ್ ಇಂಡಿಯಾದ Politics ಹೊಳೆಗೆ ಧುಮುಕಬೇಕು. ಅಷ್ಟೇತಾನೆ ನಿನ್ನ ಅಭಿಪ್ರಾಯ.

**ರಾಮಚಂದ್ರನ್.**—ಬೇಡಿ, ಬೇಡಿ, ರಾಯರೇ, ಹಾಗೆ ದುಡುಕಿ ದುಢುಂ ಅಂತ ಧುಮುಕಬೇಡಿ. ರಾಜಕೀಯ ವಿಚಾರವೊಂದರಿಂದಲೇ ಮುಕ್ತಿ ಅಂತ ನಾನು ಹೇಳಲಿಲ್ಲ. ನಮ್ಮ ದೇಶದಲ್ಲಿ ನಮ್ಮ ಸೋದರ ವರ್ಗದವರ ಸ್ಥಿತಿಗಳು ಸ್ವಲ್ಪ ಉತ್ತಮವಾಗುವಂತೆ ಮಾಡಿದರೂ ನಮ್ಮ ಜೀವನವು ಸಾರ್ಥಕವಾಗುವುದು. ಮಾಡಬೇಕಾದರೆ ಕೆಲಸಕ್ಕೆ ಕಡಿಮೆಯೇನಯ್ಯ? ರಾಜಕೀಯ ವಿಚಾರಗಳು ಬೇಡ ಅಂದರೂ ಉಳಿದ ಎಷ್ಟೋ ಕಾರ್ಯಗಳು ಕಾದೇ ಇವೆ. ನನ್ನ ಹುಚ್ಚು ತಲೆಯಲ್ಲಿ ಏನೇನೋ ಆಲೋಚನೆಗಳು ತರಂಗ ತರಂಗವಾಗಿ ಹೊರಡ್ತಾ ಇವೆ. ನನ್ನಲ್ಲಿ ಮಾತ್ರ ಹಣವಿದ್ದರೆ ತೋರಿಸುತ್ತಿದ್ದೆ. ಇಷ್ಟಕ್ಕೂ ಹಲ್ಲಿದ್ದವರಿಗೆ ಕಡಲೆಯೆಲ್ಲಿ ಸಿಕ್ಕುತ್ತೆ?

**ರಾಘವೇಂದ್ರರಾಯ.**—ಅಯ್ಯ, ರಾಮಚಂದ್ರನ್! ನೀನು ಸುಮ್ಮನೆ ಕಾಡಿಗೆ ಹೋಗಿ ಬಿಡಯ್ಯ. ಒಂದು ಆಲದ ಮರದ ಕೆಳಗೆ ಮಲಗಿಬಿಡು. ಒಂದು ಹಾವು ಬಂದು ನಿನ್ನ ತಲೆಯ ಹತ್ತಿರ ಹೆಡೆಬಿಟ್ಟು ಆಡಲಿ. ಆಮೇಲೆ ಅಲ್ಲಿ ಅಗೆಸಿಬಿಟ್ಟರೆ ಏಳು ಕೊಪ್ಪರಿಗೆ ಹಣ ಸಿಕ್ಕುತ್ತದೆ. ಮುಂದೆ ಗೊತ್ತೇ ಇದೆ. ನಿನ್ನ ಮನಸ್ಸಿನಲ್ಲಿರುವ ಗಾಳಿಗೋಪುರಗಳಿಗೆಲ್ಲಾ ಚಿನ್ನದ ಮುಲಾಂ. ನಮಗೆಲ್ಲಾ ಕಾಫಿ ತಿಂಡಿ, ವನವಿಹಾರ.

**ರಾಮಚಂದ್ರನ್.**—ಹಾಸ್ಯ ಮಾಡಬೇಡಮ್ಮ, ಲೋ. ವಾಷಿಂಗ್ಟನ್, ಲಿಂಕನ್, ಶಿವಾಜಿ, ಪ್ರತಾಪಸಿಂಹ, ಮುಂತಾದವರೆಲ್ಲಾ ನಮ್ಮಂತೆ ಮನುಷ್ಯರೇ. ಅವರೇನೂ ಸ್ವರ್ಗಲೋಕದಿಂದ ಇಳಿದುಬಂದಿರಲಿಲ್ಲ. ಭಾರತಮಾತೆಯು ವೀರಮಾತೆ.

**ರಾಘವೇಂದ್ರರಾಯ ಮತ್ತು ನಾರಾಯಣಶಾಸ್ತ್ರಿ.**—ಅಭಿನವ ಶಿವಾಜೀ ಕು ಜೈ! ಅಭಿನವ ಪ್ರತಾಪಸಿಂಹಾ ಕು ಜೈ ಜೈ. ದರಿದ್ರ ದಾಮೋದರಾ ಕು ಜೈ ಜೈ ? (ಗಟ್ಟಿಯಾಗಿ ನಗುವರು.)

**ಕೃಷ್ಣಮೂರ್ತಿ.**—(ನಗುವನ್ನು ಕಷ್ಟದಿಂದ ತಡೆದುಕೊಂಡು) ಹೀಗೆ ಹಾಸ್ಯ ಮಾಡಬಾರದಯ್ಯ. I say ರಾಘು, "ನೀಲ ಕುಂತಲೆ" ಎಂಬ ಮಟ್ಟು ಹಾಡಮ್ಮ, ಲೋ.

**ನಾರಾಯಣಶಾಸ್ತ್ರಿ.**—ಭೇಷ್, ಭೇಷ್, ಒಳ್ಳೆ ಹಾಡು, ನನಗೂ ಸಮ್ಮತ.

(ರಾಘವೇಂದ್ರರಾಯನು ಹಾಡುತ್ತಿರುವನು. ಉಳಿದವರು ತಲೆಯನ್ನು ತೂಗುತ್ತಿರುವರು. ಆಗ ರಂಗರಾಯನು ಪ್ರವೇಶಿಸುವನು. ಅಭಿನಯದೊಡನೆ ಹಾಡುತ್ತಿದ್ದ ರಾಘವೇಂದ್ರರಾಯನು ರಂಗರಾಯನ ಕಡೆಗೆ ನೋಡದೆ ಒಂದೆರಡು ಕ್ಷಣ ಹಾಡುತ್ತಿದ್ದು ಆ ಬಳಿಕ ಅವನ ಕಡೆ ನೋಡಿ ನಾಚಿ, ತಟಕ್ಕನೆ ಹಾಡನ್ನು ನಿಲ್ಲಿಸಿಬಿಡುವನು.)

**ರಂಗರಾಯ.**—Go on, go on, ಹಾಡಿಕೊಳ್ಳಿ. ಸಂತೋಷ. I am sorry I disturbed you. ಕನ್ನಡಕ ಬೇಕಾಯಿತು. (ಜೇಬಿನಿಂದ ಕನ್ನಡಕವನ್ನು ತೆಗೆದುಕೊಂಡು ಹೋಗುವನು.)

**ರಾಘವೇಂದ್ರರಾಯ.**—ಏನಯ್ಯ, ಕೃಷ್ಣಮೂರ್ತಿ! ಒಳ್ಳೆಯ ಮನನ್ನೇ ಕಾವಲಿಟ್ಟೆ. ನನ್ನ ಮಾನ ಹೋಯಿತು.

**ಕೃಷ್ಣಮೂರ್ತಿ.**—ಮಾನ ಇದ್ದರೆತಾನೆ ಹೋಗೋದು? ಹಾಡಿದರೆ ಅವಮಾನವೇನೊ? ನನಗೆ ಮಾತ್ರ ಹಾಡು ಬಂದಿದ್ದರೆ ಮನೇಮೇಲೆ ಕೂತು ಹಾಡ್ತಾ ಇದ್ದೆ. ಲತೀಫ್, ಲತೀಫ್.

**ನಾರಾಯಣಶಾಸ್ತ್ರಿ.**—ಇದಕ್ಕೇ ನೋಡು ಡಾರ್ವಿನ್ ನಮ್ಮನ್ನ ಕೋತಿಗಳ ಸಂತತಿಯೋರು ಅಂದಿರೋದು.

**ಲತೀಫ್.**—(ಪ್ರವೇಶಿಸಿ) ಸಾಮಿ, ಏನೋ ಸಾಮಿ.

**ಕೃಷ್ಣಮೂರ್ತಿ.**—(ದರ್ಪದಿಂದ) ನಾನು ಹೇಳಿದ್ದೇನು, ನೀನು ಮಾಡಿದ್ದೇನೊ?

**ನಾರಾಯಣಶಾಸ್ತ್ರಿ.**—(ರಾಘವೇಂದ್ರರಾಯರೊಡನೆ) ಅವನ ಗತ್ತು ನೋಡಿದೆಯಾ ಹೇಗಿದೆ? ಜಂಭದ ಕೋಳಿ.

**ಅಬ್ದುಲ್ ಲತೀಫ್.**—ಅರೆ ಅಲ್ಲಾ, ಇಲ್ಲಿ ಬಂತೂ ಪೀಕಲಾಟ! ಅರೇ ಸಾಮಿ, ನೀನು ಹೇಳಿದ್ದು ಮಾಡ್ದೇ ಇದ್ರೋನ್ಗೆ ಥೂ ಅನ್ನು. ಕಾಫರ್ ಅನ್ನು.

**ಕೃಷ್ಣಮೂರ್ತಿ.**—ಯಜಮಾನರು ಬರೋದನ್ನ ಯಾಕೆ ಹೇಳಲಿಲ್ಲ ನೀನು? ಹರಟೆಕೋರ.

**ಅಬ್ದುಲ್ ಲತೀಫ್.**—ಮನೇ ಯಜಮಾನ್ರು ಕೆಲಸ ಹೇಳಿದ್ರು. ಹೊರಗಿನ ಯಜಮಾನರು ಬಂದದ್ದು ತಿಳಿಸಲಿಲ್ಲ.

**ಕೃಷ್ಣಮೂರ್ತಿ.**—ಸರಿಯಾಗಿ ಬೊಗಳೋ.

**ಅಬ್ದುಲ್ ಲತೀಫ್.**—ಮನೆ ಯಜಮಾನ್ರು, ಅಮ್ಮಾವರು, ಕೆಲಸ ದ್ಮೇಲೆ ಕಳೀಸ್ಬಿಟ್ಟಿದ್ರು. ಹೋಗಿದ್ದೆ. ಅಷ್ಟರೊಳ್ಗೆ ಯಜಮಾನ್ರು ಬಂದ್ಬಿಟ್ರು. (ಹುಡುಗರೆಲ್ಲರು ಮುಖಮುಖ ನೋಡಿಕೊಂಡು ಹಾಸ್ಯಕ್ಕಾಗಿ ಸ್ವಲ್ಪ ನಗುವರು.)

**ಕೃಷ್ಣಮೂರ್ತಿ.**—ನಿನ್ನ ರಗಳೆ ಸಾಕು, ಹೋಗೊ.

(ಲತೀಫ್ ಹೋಗುವನು.)

**ನಾರಾಯಣಶಾಸ್ತ್ರಿ ಮತ್ತು ರಾಘವೇಂದ್ರರಾಯ.**—ನಾವು ಹೊರಡುತ್ತೇವಯ್ಯ, ಕೃಷ್ಣಮೂರ್ತಿ.

**ಕೃಷ್ಣಮೂರ್ತಿ.**—All right. Good Morning.

**ರಾಮಚಂದ್ರನ್.**—ನಾನೂ ಹೊರಡುತ್ತೇನಯ್ಯ.

**ಕೃಷ್ಣಮೂರ್ತಿ.**—ನಿನಗೇನು ಅವಸರ? ಅವರಂತೂ ಹಾಸ್ಟಲಿಗೆ ಹೋಗಬೇಕು.

(ನಾರಾಯಣಶಾಸ್ತ್ರಿಯೂ, ರಾಘವೇಂದ್ರರಾಯನೂ ಹೋಗುವರು.)

**ಕೃಷ್ಣಮೂರ್ತಿ.**—ರಾಮಚಂದ್ರನ್! ನಾನು ಮೊನ್ನೆ ಹೇಳಿದ ವಿಷಯವೇನಾಯಿತು?

**ರಾಮಚಂದ್ರನ್.**—ನಾನೂ ಅದನ್ನೇ ಯೋಚಿಸಿ ನೋಡಿದೆ.

**ರಂಗರಾಯ.**—(ಪ್ರವೇಶಿಸಿ ಕುರ್ಚಿಯಮೇಲೆ ಕುಳಿತು) ರಾಮಚಂದ್ರನ್! ನೀವು ಕನ್ನಡದಲ್ಲಿ ಬಹಳ ಬುದ್ಧಿವಂತರೆಂದು ಕೇಳಿ ಸಂತೋಷವಾಯಿತು. ನೀವು ನಮ್ಮ ಜನವೆಂತ ಕೇಳಿದ ಮೇಲಂತೂ, ನನಗೆ ಮತ್ತೂ ಸಂತೋಷವಾಯ್ತು. ನೀವು ದೊಡ್ಡ ಮನಸುಮಾಡಿ ನಮ್ಮ ಕೃಷ್ಣಮೂರ್ತಿ ಹೇಳಿರೋ ಕೆಲಸ ಆಗಮಾಡಿಕೊಟ್ಟರೆ, I shall feel very much obliged to you. ನಮ್ಮ ಕಾಲದಲ್ಲಿ ಕನ್ನಡಕ್ಕೆ ಈಗಿನ ಹಾಗೆ prominence ಇರಲಿಲ್ಲ. ನಾವು ಓದಲೂ ಇಲ್ಲ. ಈಗ ಮೆಂಬರಾಗೋಕೆ ನಿಲ್ಲೋರಲ್ಲಿ ಅನೇಕರು ಕನ್ನಡದಲ್ಲಿ ಬಹಳ ಬುದ್ಧಿವಂತರು. ನಿಮ್ಮ help ನನ್ನ ದಡಕ್ಕೆ ಹಾಕಬೇಕು.

**ರಾಮಚಂದ್ರನ್.**—ನಮ್ಮ ಜನವಾಗಿ ತಾವು ಅಷ್ಟು ಹೇಳಬೇಕಾಗಿಲ್ಲ, ಸಾರ್. ಆದರೆ, ನನಗೆ examination ತಂಟೆ ಇದೆ. ಓದಬೇಕು. ತಾವು ನನ್ನ ಬಹುವಚನದಲ್ಲಿ "ನೀವು, ನಿಮ್ಮ" ಅಂತ ಮಾತನಾಡಿಸಬೇಡಿ, ಸಾರ್.

**ರಂಗರಾಯ.**—ಒಳ್ಳೇ ನಡತೆ ಅಂದರೆ ಹೀಗಿರಬೇಕು. ಅದೂ ಆಗಲಿ. ನಿನಗೆ ಎಲ್ಲಾ ಅನುಕೂಲವೂ ಮಾಡಿಕೊಡ್ತೇನೆ. ನಮ್ಮ ಕಿಟ್ಟೂ ಜೊತೇಲಿ ಓದಿಕೊ. ಇಲ್ಲೇ ಇದ್ದುಬಿಡು. ನೀನು ಈಗ private tuition ಗಳಿಗೆ ಹೋಗೋ time ನನ್ನ ಕೆಲಸಕ್ಕೆ ಹಾಕಿದರೆ ಸಾಕು. ವಿಷಯ ಮಾತ್ರ strictly confidential ಆಗಿರಬೇಕು. ನನಗೆ ಮಾತ್ರ ಮೆಂಬರ್‌ಷಿಪ್ ದೊರೆತರೆ, ಕನ್ನಡದ ಪ್ರೋತ್ಸಾಹಕ್ಕಾಗಿ ಹೋರಾಡ್ತೇನೆ. ನಾನು ಕನ್ನಡ ಅಲಕ್ಷ್ಯಮಾಡಿದ್ದಕ್ಕೆ ಅದೇ ಪ್ರಾಯಶ್ಚಿತ್ತ.

**ರಾಮಚಂದ್ರನ್.**—ಆಗಲಿ ಸಾರ್. ನೀವು ಇಷ್ಟು ಘನವಾದ ಆಶಯ ಇಟ್ಟುಕೊಂಡಿರುವಾಗ ನಾನು ಅವಶ್ಯವಾಗಿ ನಿಮ್ಮ ಕೆಲಸಕ್ಕೆ ಸಹಾಯ ಮಾಡುತ್ತೇನೆ. ನಿಮ್ಮ ಕಾಲದಲ್ಲಿ ಕನ್ನಡಕ್ಕೆ ಪಾಠಶಾಲೆಗಳಲ್ಲಿ ಸರಿಯಾದ ಸ್ಥಾನವಿರಲಿಲ್ಲ. ಅದರಿಂದಲೇ ನೀವು ಹೆಚ್ಚಾಗಿ ಅದಕ್ಕೆ ಗಮನ ಕೊಡಲಿಲ್ಲ.

ನಮ್ಮ ನಾಡಿನ ಉಸಿರೇ ಕನ್ನಡ. ನಮ್ಮ ಜೀವದ ತಿರುಳೇ ನಮ್ಮ ಸವಿಗನ್ನಡ. ನಮ್ಮ ದೇಶದ ಭಾಗ್ಯವೇ ನಮ್ಮ ಸಿರಿಗನ್ನಡ. ಅದಕ್ಕೆ ಪ್ರೋತ್ಸಾಹ ಬರುವ ಹಾಗೆ ನೀವು ಹೋರಾಡುವುದಾಗಿ ನಿರ್ಧರಿಸಿದ್ದೀರಿ. ಇದು ದೊಡ್ಡ ಕೆಲಸ. ಇದಕ್ಕೆ ಪರೋಕ್ಷವಾಗಿಯಾದರೂ ನನ್ನಿಂದ ಸೇವೆ ದೊರೆಯುತ್ತಲ್ಲ. ಅದೇ ನನಗೊಂದು ಸಂತೋಷ.

**ರಂಗರಾಯ.**—ನೀನು idealist ಕಣಯ್ಯ. ನೀನು ಮಾತನಾಡ್ತಾ ಇದ್ದರೆ ಕಣ್ಣೇ ಹೊಳೆಯುತ್ತೆ. Eyes sparkling and flashing. Heart full of emotion. ಮಗು, ಕಿಟ್ಟು, ನೀನು ಒಂದು ಕಪ್ ಕಾಫಿ ತಂದು ಕೊಡು. (ಕೃಷ್ಣಮೂರ್ತಿಯು ಒಳಗೆ ಹೋಗುವನು.) ನೋಡಯ್ಯ, ನಾನು ಮೆಂಬರಾಗೋಕೆ ಈ manifesto publish ಮಾಡಬೇಕು ಅಂತ ಇದ್ದೀನಿ. Of course ಅದರ ಕನ್ನಡ ದೇವರಿಗೇ ಪ್ರೀತಿ. ನಿನ್ನಿಂದ ಅದು ಪಾಲಿಷ್ ಆಗಬೇಕು. ನನ್ನ ideas ಅದರಲ್ಲಿ ಸೂಚಿಸಿದ್ದೇನೆ. (ಕಾಗದವನ್ನು ಕೊಡುವನು.)

**ರಾಮಚಂದ್ರನ್.**—(ಅದನ್ನು ಓದಿ) ನಾನು ಹೇಳಿದ್ದಕ್ಕೆ ತಾವೇನೂ ತಿಳಿದುಕೋಬಾರದು, ಸಾರ್. ಇದರಲ್ಲಿ ಇಂಗ್ಲಿಷ್ ಪದಗಳು ಸೇರಿಸಿ ಬರೆದಿದೆ. ಶುದ್ಧವಾಗಿ ಕನ್ನಡ ಮಾತ್ರವೇ ಸೇರಿಸಿ ಬರೆದುಬಿಡೋಣ. ಇಲ್ಲದೆಹೋದರೆ ಯಾರಿಗೋಸ್ಕರ ಅದನ್ನ ಬರೆದಿದ್ದೇವೋ ಅವರಿಗೇ ಅದು ಅರ್ಥವಾಗುವುದಿಲ್ಲ. ಇದು ನೋಡಿ: "Patriotism ಸ್ವಲ್ಪವೂ ಇಲ್ಲದೋರೆಲ್ಲಾ ಎಲೆಕ್ಷನ್ನಿಗೆ ನಿಂತು, ವೋಟು ಕೊಡಿ, ವೋಟು ಕೋಡಿ ಅಂತ ಕೇಳ್ತಾ ಇದ್ದಾರೆ" ಎಂಬುದು ಸರಿಯಾಗಿಲ್ಲ. ದೇಶಸೇವೆ ಮಾಡಬೇಕು ಅನ್ನೋ ಕುತೂಹಲದಿಂದಲೇ ಎಲ್ಲರೂ ಸದಸ್ಯರಾಗಬೇಕೆಂತ ಬಯಸುತ್ತಾರೆ. ಅವರಿಗೆ ದೇಶಾಭಿಮಾನವಿಲ್ಲವೆಂತ ದೂಷಿಸಬಹುದೆ? ಇದಕ್ಕೆ ಬದಲಾಗಿ, "ಸದಸ್ಯರಾಗಿ ನಿಲ್ಲಬೇಕೆಂದಿರುವವರಲ್ಲಿ ಯಾರು ನಿಜವಾಗಿಯೂ ದೇಶಾಭಿಮಾನದಿಂದ ಕೂಡಿದ್ದಾರೆಂಬುದನ್ನು ಚೆನ್ನಾಗಿ ಯೋಚಿಸಿ ನೋಡಿ ನಿಮ್ಮ ಘನವಾದ ಸಹಾಯವನ್ನು ಅವರಿಗೆ ಮಾತ್ರವೇ ಮಾಡಿರಿ" ಎಂದು ಬರೆಯೋಣ. ಅಥವಾ ತಾವು ಒಪ್ಪಿದರೆ ಇತರ ರೀತಿಯಲ್ಲಿಯೇ ಬೇರೆ ಬರೆದು ಬಿಡೋಣ.

**ರಂಗರಾಯ.**—Certainly, certainly, ಹೀಗೆ ಬರೆದರೆ splendid ಆಗಿರುತ್ತೆ. ಹಿಂದೆ ಯಾರೋ ಒಬ್ಬ ವೈಸ್ರಾಯಿಗೋ ಇನ್ಯಾರಿಗೋ ಯಾರೋ ಒಬ್ಬರು, "Such a wise head on such young shoulders" ಅಂತಾಲೋ ಏನೋ ಹೇಳಿದರಂತೆ. ನಿನಗೂ ಹಾಗೇ ಹೇಳಬಹುದಯ್ಯ. ಎಂಥ ಎಳೆ ಹೆಗಲಿನ ಮೇಲೆ ಎಂಥ ಬುದ್ಧಿವಂತ ತಲೆ ಅಂತ!

(ರಾಮಚಂದ್ರನ್ ನಗುವನ್ನು ಕಷ್ಟದಿಂದ ಅಡಗಿಸುವನು. ಕೃಷ್ಣಮೂರ್ತಿಯು ಕಾಫಿಯ ಬಟ್ಟಲನ್ನು ಹಿಡಿದು ಪ್ರವೇಶಿಸುವನು.)

**ಕೃಷ್ಣಮೂರ್ತಿ.**—ನೀನು ಹೇಳಿದ ಕನ್ನಡದಿಂದ ಆ ಇಂಗ್ಲಿಷ್ sentenceನಲ್ಲಿದ್ದ ideaನೇ ಲಾಗಾ ಹೊಡೆದು ಗೋತಾಹಾಕಿತಲ್ಲಪ್ಪ.

**ರಂಗರಾಯ.**—(ನಗುತ್ತ) ನಮ್ಮ ರಾಮಚಂದ್ರನ್ ಇದ್ದಾನಲ್ಲ ಅದನ್ನೆಲ್ಲಾ ಸರಿಮಾಡೋಕೆ? ರಾಮಚಂದ್ರನ್! ಕಾಫಿ ತೊಗೊಳ್ಳಪ್ಪ.

**ರಾಮಚಂದ್ರನ್.**—ನನಗೇ ತಾವು ಕಾಫಿ ತರಿಸಿದ್ದು? ನಾನು ತಮಗೇನೋ ಅಂತಿದ್ದೆ. ಕ್ಷಮಿಸಬೇಕು. ಆಗಲೇ ಕಾಫಿ ಆಗಿದೆ.

**ರಂಗರಾಯ.**—ಕಾಫೀಗೇನಯ್ಯ ರಾಮಚಂದ್ರನ್? ಮುತ್ತೈದೆ ಹೆಂಗಸಿಗೆ ಅರಿಸಿನ ಕುಂಕುಮ ಹೇಗೋ ಗಂಡಸಿಗೆ ಕಾಫಿ ಹಾಗೆ. ಎಲ್ಲಿ, ಯಾರು, ಎಷ್ಟು ಸಲ ಕೊಟ್ಟರೂ ಬೇಡ ಅನ್ನಬಾರದು. ಕುಡಿಯಯ್ಯ, ಕಂಡಿದಾರೆ.

**ಕೃಷ್ಣಮೂರ್ತಿ.**—ಅಷ್ಟೇಕಯ್ಯ ನಿನಗೆ ಕಷ್ಟ? ನಾನೂ ಸಹಾಯ ಮಾಡ್ತೀನಿ. Come along! ನನಗೆ ಅರ್ಧ. ನಿನಗೆ ಅರ್ಧ.

(ಇಬ್ಬರೂ ಕಾಫಿಯನ್ನು ಕುಡಿಯುವರು.)

**ರಾಮಾಜೋಯಿಸ.**— (ಪ್ರವೇಶಿಸಿ) ರಾಯರ ಸಮಯ ಹೇಗಿದೆಯೊ?

**ರಂಗರಾಯ.**—ದಯಮಾಡಿ ರಾಮಾಜೋಯಿಸರೇ, ದಯಮಾಡಿ, ಇಲ್ಲಿ ಕೂಡಿ. (ಒಂದು ಕುರ್ಚಿಯನ್ನು ತೋರಿಸುವನು. ರಾಮಾಜೋಯಿಸನು ಕುಳಿತುಕೊಳ್ಳುವನು.)

**ರಾಮಾಜೋಯಿಸ.**—ನೆಲದಮೇಲೆ ಕೂತು ದಿಂಬು ಒರಗಿ ಕೊಳ್ಳೋ ಅನುಕೂಲ ಇದರಲ್ಲಿ ಇಲ್ಲ ನೋಡಿ. ಷರಾಯಿನೋರಿಗೆ ಕುರ್ಚಿ. ಪಂಚೆಯೋರಿಗೆ ನೆಲ. ಅದೇ ಸರಿ.

**ರಂಗರಾಯ.**—ಇದ್ದದ್ದು ಇದ್ದಹಾಗೇ ಇರೋದು ಸಾಧ್ಯವೆ ಜೋಯಿಸರೆ? ನಾಗರಿಕತೆ ಹೆಚ್ಚ ಬೇಡವೆ? ನಿಮಗೆ ಒಂದು ರತ್ನ ತೋರಿಸ್ತೇನೆ, ತಾಳಿ. ಈ ಹುಡುಗ ರತ್ನ ನೋಡಿ. ನಮ್ಮ ಜನ. ಅದು ಇನ್ನೂ ವಿಶೇಷ.

**ರಾಮಾಜೋಯಿಸ.**— (ಅವನ ಕಡೆಗೆ ದೃಷ್ಟಿಸಿ ನೋಡಿ) ಇವನೇ, ಇವನೇ, ನಮ್ಮೂರು ಕೊನೇ ಮನೆ ಗೋಪಾಲಯ್ಯನ ಮಗ ರಾಮನಲ್ಲ ವೇನೋ ನೀನು? ಬಹುದಿವಸಗಳ ಕೆಳಗೆ ನೋಡಿದ್ದು.

**ರಾಮಚಂದ್ರನ್.**—ಹೌದು, ತಾವು ನನ್ನ ಮರೆತುಬಿಟ್ಟಿದ್ದೀರೋ ಏನೋ ಅಂತಿದ್ದೆ. ಅಲ್ಲದೆ, ನೋಡಿಯೂ ಬಹಳ ವರ್ಷವಾಗಿತ್ತು. ಬೇಗ ಗುರುತು ಸಿಕ್ಕಲಿಲ್ಲ.

**ರಂಗರಾಯ.**—ಓಹೋ! ತಮಗೆ ಇವನು ಗೊತ್ತು, ಹಾಗಾದರೆ.

**ರಾಮಾಜೋಯಿಸ.**—ತಾವಾದರೆ ಬಹಳ ಮೊದಲೇ ಊರುಬಿಟ್ಟು ಬೆಂಗಳೂರನ್ನೇ ಸ್ಥಳಮಾಡಿಕೊಂಡುಬಿಟ್ಟಿರಿ. ಇದೂ ಅಲ್ಲದೆ ಈಗಿನ ಕಾಲ ದವರಿಗೆ ಹಳೇ ಕಾಲದ ಪದ್ಧತಿಹಾಗೆ "ಇವರ್‍ಯಾರು, ಅವರ್‍ಯಾರು" ಅಂತ ವಿಚಾರಣೆ ತೆಗೆದುಕೊಳ್ಳೋಕೆ ಮನಸ್ಸೂ ಇಲ್ಲ. ವ್ಯವಧಾನ ಮೊದಲೇ ಇಲ್ಲ. ನಾನೇ ಊರುಬಿಟ್ಟು ಬಂದುಬಿಟ್ಟಿದ್ದೇನೆ. ನಿಮ್ಮನ್ನೇಕೆ ಆಕ್ಷೇಪಿ ಸಲಿ ಹೇಳಿ. ಏನಯ್ಯ, ನೀನು ನಮ್ಮ ಗೋಪಾಲನ ಮಗನೆ, ನಮ್ಮ ಗೋಪೂ ಮಗನೆ! (ಕಂಬನಿದುಂಬಿ ಗದ್ಗದ ಧ್ವನಿಯಿಂದ) ನಾನೂ ನಿಮ್ಮಪ್ಪನೂ ಎಷ್ಟು ಸ್ನೇಹವಾಗಿದ್ದೆವಯ್ಯಾ ಮಗು! ಆ ಕಾಲ ಇನ್ನೆಲ್ಲಿ? (ನಿಟ್ಟುಸಿರು ಬಿಟ್ಟು) "ತೇ ಹಿ ನೋ ದಿವಸಾ ಗತಾಃ" ಎಂದು ರಾಮರು ಪೇಚಾಡಿದ ಹಾಗೆ, ಆ ಕಾಲವೇ ಕಳೆದುಹೋಯಿತು, ಈ ಊರಿನಲ್ಲಿಯೇ ಇದ್ದೀಯೆ. ಒಂದು ದಿನವೂ ಸಿಕ್ಕಲಿಲ್ಲವಲ್ಲಯ್ಯ? ನಮ್ಮ ಮನೆಯೋ ಎಲ್ಲೋ ಒಂದು ಅಭುಕ್ತ ಮೂಲೆಯಲ್ಲಿದೆ. ಬಾಣ್ಣ! ಮನೇ ಕಡೆ, ನಮ್ಮನ್ನೆಲ್ಲಾ ದೂರ ಮಾಡಬೇಡಪ್ಪ. ಮನೆ ಗುರುತು ಹೇಳ್ತೇನೆ. ಬಾಪ್ಪ ನಮ್ಮ ಮನೆಗೆ.

**ರಾಮಚಂದ್ರನ್.**—ಅಷ್ಟು ದೊಡ್ಡಮಾತು ಬೇಡಿ. ನಿಮ್ಮ ಅಂತಃಕರಣಕ್ಕೆ ಏನು ಹೇಳಬೇಕೋ ತಿಳಿಯದು. (ಎದ್ದುಬಂದು ನಮಸ್ಕರಿಸಿ) ತಮ್ಮನ್ನ ನೋಡಿದ ಮೇಲೆ ತಂದೆತಾಯಿಗಳನ್ನ ಕಳೆದುಕೊಂಡೆನೆನ್ನಿಸುವುದಿಲ್ಲ.

**ರಾಮಾಜೋಯಿಸ.**—(ಕಣ್ಣುಗಳನ್ನೊರಸಿಕೊಂಡು) ಪೂರ್ಣಮನಸ್ಸಿನಿಂದ ಆಶೀರ್ವಾದಮಾಡ್ತೇನೆ (ಯುವಕನ ತಲೆಯಮೇಲೆ ಕೈಯಿಟ್ಟು) ಮೂರ್ಧನ್ಯನಾಗಿ ಬಾಳಪ್ಪ. ದೇಶದಲ್ಲೇ ಪ್ರಖ್ಯಾತನಾಗಪ್ಪ. ವರ್ಧಿಷ್ಣುವಾದ ನಿನ್ನನ್ನ ಸ್ವರ್ಗದಿಂದಲೇ ನಮ್ಮ ಗೋಪು ನೋಡಿ ನೋಡಿ ಆನಂದಪಡಲಪ್ಪ (ರಾಮಚಂದ್ರನ್ ಮೊದಲಿನಂತೆ ಮತ್ತೆ ಕುರ್ಚಿಯಮೇಲೆ ಕುಳಿತುಕೊಳ್ಳುವನು.)

**ರಂಗರಾಯ.**—ನಿಮ್ಮ ಮನಸ್ಸು ಎಷ್ಟು ಮೃದು, ಜೋಯಿಸರೆ! ಸ್ನೇಹ ಅಂದರೆ ಹೀಗಿರಬೇಕು. ಹಿಂದಿನ ಕಾಲದವರಲ್ಲಿ ನಾಗರಿಕತೆಯಿಲ್ಲ—ಅನ್ನೋದು ಶುದ್ಧತಪ್ಪುತಿಳಿವಳಿಕೆ. ಆದರೂ ಎಲ್ಲಾವೈದಿಕರೂ ಹೀಗೆಲ್ಲಿರ್ತಾರೆ?

**ರಾಮಾಜೋಯಿಸ.**—"ಎಂದರೋ ಮಹಾನುಭಾವಲು" ಅಂತ ತ್ಯಾಗಯ್ಯನೋರ ಕೀರ್ತನೆ ಹಾಡ್ತಾರೆ ನೋಡಿ; ಹಾಗೆ ಎಂಥೆಂಥ ಮಹಾನುಭಾವರೋ ಇದ್ದಾರೆ ಸ್ವಾಮಿ. ಇಲ್ಲದೇ ಉಂಟೆ? ನಾನೇನು ಹೇಳಿ, ಅತ್ತಿಹಣ್ಣಿನ ಹುಳುವಿನ ಹಾಗೆ ಯಃಕಶ್ಚಿತ್ ಮನುಷ್ಯ.

**ಕೃಷ್ಣಮೂರ್ತಿ.**—ಹಾಗೆನ್ನಬೇಡಿ ಜೋಯಿಸರೆ. ಅನೇಕವೈದಿಕರು ಖಂಡಕೀಳೋ ಕಾಗೆಗಳ ಹಾಗೆ ಆಗಿದ್ದಾರೆ. ಅವರ ಅನಾಚಾರಕ್ಕೆ ಗೊತ್ತುಗುರಿಯೇ ಇಲ್ಲ.

**ರಾಮಾಜೋಯಿಸ.**—ಒಳ್ಳೆಯವರೂ, ಮಹಾನುಭಾವರೂ ಇದ್ದಾರೆ. ಆದರೂ, ಆಚಾರಶೀಲರಲ್ಲದವರೂ ಇದ್ದಾರೆ. ವೈದಿಕರೆಲ್ಲರೂ ಸರಿಯಾಗಿದ್ದ ಪಕ್ಷಕ್ಕೆ ಬ್ರಾಹ್ಮಣ್ಯ ಈಗಿನ ಹಾಗೆ ಖಿಲವಾಗುತ್ತಲೂ ಇರಲಿಲ್ಲ; ಬ್ರಾಹ್ಮಣರಮೇಲೆ ಎಲ್ಲರೂ ಕೋಗೀರು ಹೇರಿ ಆಕ್ಷೇಪಿಸುತ್ತಲೂ ಇರಲಿಲ್ಲ. ಅದರ ಗೌರವ ಅದಕ್ಕೆ ಇರುತ್ತಲೇ ಇತ್ತು.

**ರಂಗರಾಯ.**—ನಿಜ, ನಿಜ. ಜೋಯಿಸರೆ! ನಿಮ್ಮಿಂದ ಒಂದು ಉಪಕಾರವಾಗಬೇಕು. ನಾನು ಈ ಸಾರಿ Representative Assemblyಗೆ ಮೆಂಬರಾಗೋಕೆ ನಿಲ್ಲಬೇಕು.

**ರಾಮಾಜೋಯಿಸ.**—ಪ್ರಜಾಪ್ರತಿನಿಧಿ ಸಭೆ ಅಂತಾರಲ್ಲ ಅದಕ್ಕೆ ತಾನೆ? ಬಹಳ ಸಂತೋಷ, ಬಹಳ ಸಂತೋಷ.

**ರಂಗರಾಯ.**—ಹೌದು, ಹೌದು. ಇಂಗ್ಲಿಷ್ ಹೆಸರು ಬಂದಷ್ಟು ಬೇಗ ಕನ್ನಡ ಹೆಸರು ಬರೋಲ್ಲ. ಅವಸ್ಥೆ ಸ್ವಾಮಿ.

**ರಾಮಾಜೋಯಿಸ.**—ಇಂಗ್ಲಿಷ್ ಕವಿಗಳ ಕವಿತ್ವದ ಹಾಗೆ ನಮ್ಮ ಕವಿಗಳ ಕವಿತ್ವ ಜ್ಞಾಪಕವಿರೋಲ್ಲ. ಹೋಗಲಿ. ನನ್ನಿಂದೇನು ತಮಗಾಗಬೇಕಾದ ಸಹಾಯ? ರಾಯರೆ, ತಮ್ಮಂಥೋರೆ "ಇಂಗ್ಲಿಷ್ ಮಯಂ ಜಗತ್" ಮಾಡಿಬಿಟ್ಟರೆ ಗತಿಯೇನು ಸ್ವಾಮಿ?

**ರಂಗರಾಯ.**—ಏನು ಮಾಡೋದು ಜೋಯಿಸರೆ? ಎಲ್ಲಾ ಕಾಲ ಮಹಿಮೆ ಜೋಯಿಸರೆ. ನನ್ನ planಗಳೆಲ್ಲಾ ಬಹಳ ಬಹಳ ಇವೆ. ನಿಮಗೆ ಜಮೀನು ಇರೋ ಎರಡು ಗ್ರಾಮಗಳಲ್ಲೂ ನಿಮ್ಮ ಮಾತಿಗೆ ಬೆಲೆ ಇದೆ. ಅಲ್ಲಿ ನಲವತ್ತು ಜನ ವೋಟರುಗಳಿದ್ದಾರೆ. ಅವರಿಂದ ನನಗೆ ವೋಟು ಕೊಡಿಸಬೇಕು.

**ರಾಮಾಜೋಯಿಸ.**—ಅಗತ್ಯವಾಗಿ, ಅಗತ್ಯವಾಗಿ. ನಮ್ಮೂರಿನವರು, ನಮ್ಮ ಗೃಹಸ್ಥರು. ನನಗೆ ಬೇಕಾದವರು. ತಮಗೆ ನನ್ನಿಂದ ಇಷ್ಟು ಸಹಾಯವೂ ಬೇಡವೆ. ಆಗಲಿ. ಆದಿರಲಿ. ಮುಂದಿನವಾರ ತಮ್ಮ ಯಜಮಾನರ ವೈದಿಕ. ನೆನಪಿಗೆ ತರೋಣ ಅಂತ ಬಂದೆ.

(ತೆರೆಯು ಬೀಳುವುದು.)

---

## ದೃಶ್ಯ ೨

[ಕಬ್ಬನ್ ಪಾರ್ಕಿನ ಒಂದು ರಸ್ತೆ. ರಂಗರಾಯನೂ ಕೃಷ್ಣಮೂರ್ತಿಯೂ ದಂಡಿನ ಕಡೆಯಿಂದ ಬರುತ್ತಿರುವರು. ಗೋವಿಂದ ಸೆಟ್ಟಿಯು ಎದುರಿಗೆ ಸಿಕ್ಕುವನು.]

**ಗೋವಿಂದಸೆಟ್ಟಿ.**—ಗುಡ್ ಈವನಿಂಗ್. ಅಪ್ಪ, ಮಗ ಇಬ್ಬರೂ ಹೊರಟಿದ್ದೀರಿ.

**ರಂಗರಾಯ.**—ಗುಡ್ ಈವನಿಂಗ್. (ಕೃಷ್ಣಮೂರ್ತಿಯೂ ಗುಡ್ ಈವನಿಂಗ್ ಎನ್ನುವನು.) ಎಲ್ಲೂ ಇಲ್ಲ. ದಂಡಿಗೆ ಹೋಗಿದ್ದೆವು. ಈ ಹುಡುಗನ ಅವಾಂತರ. ದಂಡಿನಲ್ಲೇ ಸೂಟ್ ಹೊಲಿಸಬೇಕೆಂತ ಹಠ ಹಿಡಿದ. ಹೋಗಿದ್ದೆ. ಈ ಕಾಲದ ಹುಡುಗರು.

**ಗೋವಿಂದಸೆಟ್ಟಿ.**—ಅದೇನೋ ನಿಜ. ಈಗಿನೋರು ನಮ್ಮ ಕಾಲದ ಹಾಗಲ್ಲ. ಅಂಗಿ ಅಂದರೆ ಉದ್ದವಾಗಿ ತೋಳಿದ್ದು ರವಿಕೆ ಹಾಗಿದ್ದರೂ ನಾವು ಕೋಟು ಅಂತಾಲೇ ಹಾಕಿಕೊಳ್ತಾ ಇದ್ದೆವು. ಹಿಮ್ಮಡಿವರೆಗೆ ಬರೋ ಎರಡು ಚೀಲಗಳನ್ನು ಕೂಡಿಸಿ ಲಾಡಿಹಾಕಿದರೆ ನಮ್ಮ ಷರಾಯಿ ಪೂರೈಸ್ತಾ ಇತ್ತು. ಅದು ಸರಿ. ನಾವಿಬ್ಬರೂ ಸೇರಿ ಪ್ರಕಟಿಸೋಕೆ, ಆ ಎಲೆಕ್ಷನ್ ಮ್ಯಾನಿಫೆಸ್ಟೋ ಕಳಿಸಿದ್ದೆಯಲ್ಲಾ. ಏನು ಸೊಗಸಾಗಿ ಬರೆದಿದ್ದೀಯಯ್ಯ. ಎಷ್ಟು ಸಲ ಓದಿದರೂ ತೃಪ್ತಿಯೇ ಆಗೋಲ್ಲ.

**ರಂಗರಾಯ.**—Many thanks. ಇನ್ನುಮೇಲೆ ನನ್ನ ಬರವಣಿಗೆ ಯೆಲ್ಲಾ ಹಾಗೇ ಜೋರಾಗಿರುತ್ತೆ.

**ಗೋವಿಂದಸೆಟ್ಟಿ.**—ಇನ್ನುಮೇಲೆ ಅಂತೀಯೆ! ಹಾಗಾದರೆ ಇದು ವರೆಗೆ ಐಬಾಗಿತ್ತು—ಅಂತ ಅರ್ಥವಾಗುತ್ತಲ್ಲಯ್ಯ.

**ರಂಗರಾಯ.**—(ದುಡುಕಿ ಮಾತನಾಡಿದುದಾಗಿ ಭಾವಿಸಿ ಸ್ವಲ್ಪ ಕಳವಳಪಟ್ಟು) ಇಲ್ಲಯ್ಯ ಅಂಥಾದ್ದೇನೂ ಇಲ್ಲ. ದಿನದಿನಕ್ಕೆ improvement ಇದ್ದೇ ಇರಬೇಕಲ್ಲ. ಅದಕ್ಕೆ ಹಾಗೆ ಹೇಳಿದೆ. ಸದ್ಯ ನೀನೂ ಒಪ್ಪಿದೆಯಲ್ಲ.

**ಗೋವಿಂದಸೆಟ್ಟಿ.**—ಅದರ ಸೊಗಸು ಹೇಳೋ ಹಾಗೆ ಇಲ್ಲಯ್ಯ ನಮ್ಮಿಬ್ಬರಿಗೂ ಮೆಂಬರ್‌ಷಿಪ್ ಜೇಬಿನಲ್ಲಿದ್ದಹಾಗೆ. ಆದರೆ, ನಾವು ಈಗಿ ನಿಂದಲೇ ಸಂಚಾರ ಹೊರಡಬೇಕು.

**ರಂಗರಾಯ.**—ಹೌದಯ್ಯ, delays are dangerous.

**ಗೋವಿಂದಸೆಟ್ಟಿ.**—ನಿನಗೊಂದು ಮಾತು ಹೇಳಬೇಕಯ್ಯ. ಒಬ್ಬ ಗೌಡ ಎಂಥ ಮಾತಾಡಿದ ಅಂತೀಯೆ? "ವೋಟಿಗೆ ಬರೋರು ಒಬ್ಬ ರೊಬ್ಬರ್ನ ಬೈಕೊಂಡು ಅವಂಗೆ ಬೇಡ ನಂಗೇ ಕೊಡು ಅನ್ನೋದು ತಾನೆ? ತಮ್ಮ ತಮ್ಮಲ್ಲೇ ಒಬ್ಬರ ಹುಳುಕು ಎತ್ತಿ ಆಡೋ ಜನ ಸಭೆಗೆ ಹೋಗಿ

ಒಟ್ಟಿಗೆ ಹೆಂಗಿರ್ತಾರೋ! ಅಲ್ಲಾ, ಬಯ್ದರೆ ಮುಂದೆ ಬಯ್ಯಬೇಕು, ಘೂರತ್ತಿದ್ದರೆ. ಹಿಂದೆ ಬಯ್ಯಬಾರದು. ನೀವೇ ವಾಸಿ. ಯಾರ್ನೂ ಬೈಲೇ ಇಲ್ಲ." ಅಂದ. ಎಂಥ sensible view ನೋಡಿದೆಯಾ? ನಾನು ಹೋದ ಕಡೆ ನಿನ್ನೂ ಹೊಗಳ್ತೀನಿ. ನೀನು ಹೋದ ಕಡೆ ನನ್ನೂ ಹೊಗಳು. ಸದ್ಯ ಇಬ್ಬರಿಗೂ ವೋಟು ಬರಲಿ.

**ರಂಗರಾಯ.**—ಅಗತ್ಯವಾಗಿ, ಅಗತ್ಯವಾಗಿ. ಒಬ್ಬರಿಗೊಬ್ಬರು help ಮಾಡಿ ಹೊಗಳೋ ಗುಣ ನಾವು ಬಂಗಾಳಿಗಳಿಂದ ಕಲೀಬೇಕಯ್ಯ. ನೀನೇನು ವಾಕಿಂಗ್ ಹೊರಟಿದ್ದೀಯೇನೊ?

**ಗೋವಿಂದಸೆಟ್ಟಿ.**—ಹೌದು. ಹೊರಟದ್ದೇನೋ ಹೊರಟೆ. ನಿನ್ನ ಕೈಲಿ ಮಾತಾಡಬೇಕಾದ್ದೂ ಇತ್ತು. ಬಹಳ ಜನ ನಿಂತಿದ್ದಾರೆ ಎಲೆಕ್ಷನ್ನಿಗೆ. ರುಸ್ತುಂ ಪೈಪೋಟಿ. Very keen competition. ಅಷ್ಟೊ ಅಷ್ಟು ಕಷ್ಟ, ನಾನೂ ಬಂದುಬಿಡ್ತೇನಯ್ಯ. ನಮ್ಮ plans ಎಲ್ಲಾ ನಿರ್ಧರಮಾಡಿಕೋಬೇಕು.

**ರಂಗರಾಯ.**—Very good. ಹೋಗೋಣ ನಡಿ.

(ಹೊರಟುಹೋಗುವರು.)

---

## ದೃಶ್ಯ ೩

[ರಾಮಾಜೋಯಿಸರ ಮನೆಯ ನಡುಮನೆ. "ನೇಲಿಯ ಗಳು"ವಿನ ಮೇಲೆ ಸೀರೆ ಧೋತ್ರಗಳ ಮಡಿ. ನೆಲುವಿನಮೇಲೆ ಸಕ್ಕರೆಗುಂಬಳಕಾಯಿ. ಗೋಡೆಯಮೇಲೆ ರಾಮ ಪಟ್ಟಾಭಿಷೇಕದ ಪಠ. ನಟರಾಜನ ಪಠ, ಲಕ್ಷ್ಮಿ ಸರಸ್ವತಿಯರ ಪಠಗಳು. ಒಂದು ಗೂಟಕ್ಕೆ ನೆರೆಹಿಡಿದ ಮಡಿಸೀರೆಯು ನೇತುಹಾಕಿರುವುದು. ಪಕ್ಕದಲ್ಲಿ ಅಡಿಗೆ ಮನೆಯ ಬಾಗಿಲು. ಎದುರಿಗೆ ಒಂದು ಕೊಟಡಿಯ ಬಾಗಿಲು. ಮತ್ತೊಂದು ಕಡೆ ದೇವರ ಮನೆಯ ಬಾಗಿಲು ಮಾತ್ರ ಕಾಣುತ್ತಿರುವುದು. ದೇವತಾರ್ಚನೆಯನ್ನು ಮುಗಿಸಿಕೊಂಡು, ಅಲ್ಲಿಂದ ರಾಮಾಜೋಯಿಸನು ಗಂಧಾಕ್ಷತೆಯ ತಟ್ಟೆಯನ್ನು ಹಿಡಿದು ಈಚೆಗೆ ಬರುವನು. ನಡುಮನೆಯ ನೆಲದಮೇಲೆ ಕೃಷ್ಣಾಜಿನವು ಹಾಸಿರುವುದು. ಅದರ ಬಳಿಯಲ್ಲಿ ವ್ಯಾಸಪೀಠದ ಮೇಲೆ, ಗುಲಾಬಿ ಬಣ್ಣದ ರೇಷ್ಮೆಯ ರಟ್ಟುಹಾಕಿದ ಭಗವದ್ಗೀತೆಯು ಇರುವುದು. ಜೋಯಿಸನು ಶ್ರೀಸೂಕ್ತದ ಕೊನೆಯ ಭಾಗವನ್ನು ಹೇಳುತ್ತಾ, ಮೆಲುನಡೆಯಲ್ಲಿ ಅದರ ಕಡೆಗೆ ನಡೆದು ಬರುವನು.]

**ರಾಮಾಜೋಯಿಸ.**—(ಗೋಡೆಯ ಮೇಲಿರುವ ಲಕ್ಷ್ಮಿಯ ಪಟದ ಕಡೆಗೆ ನೋಡುತ್ತ, ಆನಂದಪರವಶನಾಗಿ ರಾಮಾಜೋಯಿಸನು ಸುಸ್ವರದಲ್ಲಿ ಮಂತ್ರವನ್ನು ಹೇಳುವನು.)

ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಸ್ತುತೇ ॥
ಮಹಾದೇವ್ಯೈಚ ವಿದ್ಮಹೇ ವಿಷ್ಣುಪತ್ನ್ಯೈಚ ಧೀಮಹಿ ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥

ಓಂ ಶಾಂತಿಶ್ಶಾಂತಿಶ್ಶಾಂತಿಃ ॥ ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ॥

(ಪಟಕ್ಕೆ ಕೈಮುಗಿಯುವನು.)

**ಗೌರಮ್ಮ.**—(ಉತ್ಸಾಹಿತಳಾಗಿ ಅಡಿಗೆಯ ಮನೆಯ ಬಾಗಿಲಿನಿಂದ ನಡುಮನೆಗೆ ಬಂದು) ಎಂಥ ಮಂತ್ರ ಅಂದರೆ ಇದು! ಅವತ್ತು ಅರ್ಥ ಹೇಳಿದಿರಲ್ಲಾ. ಈಗ ನೆನಸಿಕೊಂಡರೂ ಕಣ್ಣಲ್ಲಿ ನೀರು ಬರೋಹಾಗಾಗುತ್ತೆ.

**ರಾಮಾಜೋಯಿಸ.**—ಅಷ್ಟೇನೋ ಸದ್ಯ? ನೀನು ಬಂದ ರಭಸದಲ್ಲಿ ಮೋಡವೇನೋ ಬಂತು. ಇನ್ನು ಎಂದಿನಂತೆ ಮಳೆ, ಗುಡುಗು, ಸಿಡಿಲು, ಮಿಂಚು, ಎಲ್ಲಾ ಪ್ರಾರಂಭವಾಗುತ್ತೇನೋ ಅಂತಿದ್ದೆ.

**ಗೌರಮ್ಮ.**—(ನಗುತ್ತ) ಹಾಗೆ ಮಾಡಿಕೊಂಡಿದ್ದದ್ದು ನಿಮ್ಮ ತಪ್ಪೇ! ನೀವೇಕೆ ಈಗ ಕೆಲವು ದಿನದಿಂದ ಹೇಳ್ತಾ ಇರೋಹಾಗೆ ಇಂಥಾದ್ದಕ್ಕೆಲ್ಲಾ ಅರ್ಥಹೇಳ್ತಾ ಇರಲಿಲ್ಲ? ವರ್ತಮಾನಪತ್ರಿಕೆಗಳಲ್ಲಿ ಬರುವ ಒಳ್ಳೊಳ್ಳೇ ಬರವಣಿಗೆ ಓದಿ ಹೇಳ್ತಾ ಇರಲಿಲ್ಲ?

**ರಾಮಾಜೋಯಿಸ.**—(ಮುಗುಳು ನಗೆಯಿಂದ) ಇನ್ನು ಭಯವಿಲ್ಲ. ನೀರು ಒಳ್ಳೆ ಕಾಲುವೆಗೇ ಉರುಳಿತು. ಇನ್ನು ಪ್ರವಾಹ ಎಷ್ಟು ಬೇಕಾದರೂ ಉಕ್ಕಿ ಹರಿಯಲಿ! ಅಂತೂ, ಎಲ್ಲಿ ನೋಡಿದರೂ ಗಂಡಸಿಗೇ ಕೋಗೀರು. ಏನಾದರೂ ಗಂಡಸೇ ಹೊಣೆ. ಯಾವ ಹೆಂಗಸನ್ನ ನೋಡಿದರೂ ಗಂಡಸಿನ ಮೇಲೆ ದೂರು ಹೇರೋದೆ.

**ಗೌರಮ್ಮ.**—ಅಯ್ಯೋ ಹೋಗೀ ಅಂದರೆ. ಅಲ್ಲಿ ನೋಡಿ. ಲಕ್ಷ್ಮೀದೇವಿ, ತಾಯಿ, ನಿಮ್ಮ ಮಂತ್ರ ಕೇಳಿ ಸಂತೋಷಕ್ಕೆ ಕಣ್ಣು ಅರಳಿಸಿ

ಕೊಂಡು, ನಮ್ಮಮ್ಮ ನಮ್ಮ ಕಡೆಗೇ ನೋಡ್ತಾ ಇರೋಹಾಗೆ ಕಾಣ್ತಾ ಇದ್ದಾಳೆ. (ತಲೆಯಮೇಲೆ ಕೈಜೋಡಿಸಿ ಮುಗಿದು) ನಮ್ಮಮ್ಮ, ನಿನ್ನ ಪಾದವೇ ಗತಿ. ನನ್ನ ರತ್ನದ ಗಣಿ ನನಗೆ ಉಳಿಸಿಕೊಟ್ಟೆ. ನಮ್ಮ ಲಲಿತು ತಿರುಗಿ ಹುಟ್ಟಿದ ಹಾಗಾಯಿತು. ನಿಮ್ಮ ಧರ್ಮವೇ ಅವಳನ್ನ ಕಾಪಾಡಿರಬೇಕು, ನೋಡಿ.

**ರಾಮಾಜೋಯಿಸ.**—ನೀನು ಹೇಳಿದ್ದು ಜ್ಞಾಪಿಸಿಕೊ. ಹಾಳು ಹಳ್ಳಿಯೋರು ಮನೆಗೆ ಬಂದರೆ, ಇನ್ನುಮೇಲೆ ಅಡಿಗೆ ಮಾಡಿ ಮಾಡಿ ತೋಡಬಾರದು. ಖಂಡಿತ ತೋಡಬಾರದು.

**ಗೌರಮ್ಮ.**—(ನಾಚಿಕೆಯನ್ನೂ ಪಶ್ಚಾತ್ತಾಪವನ್ನೂ ಸೂಚಿಸುವ ನಗುವಿನಿಂದ) ನಾನು ಹಾಗೆ ಹಾರಾಡ್ತಾ ಇದ್ದದ್ದು ತಪ್ಪು. ನಿಮ್ಮ ಧರ್ಮಕ್ಕೆ ಸುಮ್ಮ ನಿರಿ ಅಂದರೆ. ಕರಗದ ದಿನ ರೈತರು ಬಂದಾಗ ಕೂಗಾಡಿದ್ದು ತಪ್ಪು ಅಂತ ಕನ್ನಡಿ ಹಿಡಿದ ಹಾಗೆ ಗೊತ್ತಾಗಿದೆ, ಅಂದರೆ. ಅದು ಹೋಗಲಿ. ನೀವು ಅವತ್ತು "ವಿಶ್ವಪ್ರಿಯೇ ವಿಷ್ಣುಮನೋನುಕೂಲೆ" ಅನ್ನೋದಕ್ಕೆ ಅರ್ಥ ಹೇಳಿ, ತಿರುಗಿಸಿ ತಿರುಗಿಸಿ ಎಲ್ಲಾ ತಿಳಿಸಿಬಿಟ್ಟಿರಿ. ಆ ಮಹಾತಾಯೇ ಸ್ವಾಮಿ ಮನಸ್ಸಿಗೆ ಅನುಕೂಲಳಾಗಿ ಹಾಗಿದ್ದಾಳೆ. ನಾನು ನಿಮ್ಮ ಮನಸ್ಸಿಗೆ ಅನುಕೂಲವಾಗಿ ನಡೀಬೇಡವೆ, ಹೇಳಿ. ವೇದ ಎಷ್ಟು ಚೆನ್ನಾಗಿದೆ. ಎಷ್ಟು ಚೆನ್ನಾಗಿದೆ ಅಂದರೆ. ಮೊದಲು ಮಂತ್ರಾ ಹೇಳೋದನ್ನ ಕಂಡರೆ "ಇವರ್ಯಾಕೆ ಹೀಗೆ ಕೂಗ್ತಾರೆ, ಮಂದೆಯಿಂದ ತಪ್ಪಿಸಿಕೊಂಡ ಕುರಿಮರಿ ಹಾಗೆ?" ಎಂತ ತೋರ್ತಾ ಇತ್ತು. ನೀವು ಹಲಸಿನ ತೊಳೆ ಬಿಡಿಸಿಟ್ಟಹಾಗೆ ಅರ್ಥ ಹೇಳಿದಮೇಲೆ ನನ್ನ ಮನಸ್ಸೇ ಏನೋ ಆಗಿ ಹೋಗಿದೆ, ನೋಡಿ.

**ರಾಮಾಜೋಯಿಸ.**—(ವ್ಯಂಗ್ಯವಾಗಿ) ನಾನು ಸಂತರ್ಪಣೆಗೋಸ್ಕರ ಪುದುವಟ್ಟು ಕೊಟ್ಟಿರೋದನ್ನ ಹಿಂದಕ್ಕೆ ತೊಗೋ ಬೇಕೂ ಅಂತ ಇದ್ದೀನಿ. ಹಾಳು ತುಂಡಾಡಿಗಳು ಬಂದು ಬೊಜ್ಜು ಬೆಳೆಸಿಕೊಳ್ಳೋದಕ್ಕೆ ಅವಕಾಶ ಕೊಟ್ಟು "ಮನೆಗೆ ಮಾರಿ ಪರರಿಗುಪಕಾರಿ" ಆಗಬಾರದು. ಥೂ, ಅದೇನು ಚೆನ್ನ. ಬಾರದು, ಬಾರದು, ಮನೆಹಾಳು ಕೆಲಸ.

**ಗೌರಮ್ಮ.**—ನಿಮ್ಮ ದಮ್ಮಯ್ಯ ಸುಮ್ಮನಿರಿ, ಅಂದರೆ. ನಾನು ಬುದ್ಧಿಯಿಲ್ಲದೆ ಆಡಿದ ಮಾತುಗಳನ್ನೇ ಆಡಿ, ಆಡಿ ನನ್ನ ಮನಸ್ಸಿಗೆ ಮುಳ್ಳು ಚುಚ್ಚುವಂತೆ ಮಾಡಬೇಡಿ. ಅವತ್ತು ವಿವೇಕಾನಂದ ಸ್ವಾಮಿಗಳ ಜಯಂತಿ ಉಪನ್ಯಾಸಕ್ಕೆ ಕರೆದುಕೊಂಡು ಹೋಗಿದ್ದರಲ್ಲ. ದರಿದ್ರ ನಾರಾಯಣನ ಸೇವೆ ವಿಚಾರ ಅಲ್ಲಿ ಕೇಳಿದೆ. ಅದರ ಮೇಲೆ ನೀವು ಹೇಳಿದ್ದು ಕೇಳಿದ ಮೇಲಂತೂ, ನನ್ನ ಮನಸ್ಸೇ ಕಲಕಿಹೋಯಿತು. ನನ್ನ ಸೊಟ್ಟ ಬುದ್ಧಿ ನೆಟ್ಟಗೆ ಮಾಡಿಬಿಟ್ಟಿರಿ. ಯಾರು ಯಾರು ಎಲ್ಲೆಲ್ಲಿ ಎಷ್ಟೆಷ್ಟು ಕಷ್ಟಪಡ್ತಾ ಇದ್ದಾರೋ! ನಮ್ಮ ಸುಖವೇ ಹೆಚ್ಚೆ? ಆದಷ್ಟು ಉಪಕಾರಮಾಡಬೇಕು. ದರಿದ್ರ ನಾರಾಯಣನ ಸೇವೆಗೋಸ್ಕರ ದುಡ್ಡು ಕೊಟ್ಟಿದ್ದೀರಿ. ಅದೂ ವರ್ಷ ವರ್ಷವೂ ರಾತ್ರಿ ಸಂತರ್ಪಣೆಗೆ. ಹಗಲು ಸಂತರ್ಪಣೆ ನಡೀತಾ ಇದೆ. ರಾತ್ರಿ ಊಟಕ್ಕೆ ಜನರಿಗೆ ತೊಂದರೆ ಅಂತ ಹೀಗೆ ಮಾಡಿದ್ದೀರಿ. ಜಾತ್ರೇಲಿ ಎಷ್ಟು ಜನ ಹಾಯಾಗಿ ಊಟಮಾಡಿ ಬೆಳದಿಂಗಳಲ್ಲಿ ಆನಂದ ಪಡ್ತಾರೋ! ಒಳ್ಳೆ ಕೆಲಸ ಮಾಡಿದ್ದೀರಿ.

**ರಾಮಾಜೋಯಿಸ.**—ಆ ಪುದುವಟ್ಟು ಹಾಕಿದ ಹಣಕ್ಕೆ ವಜ್ರದ ಓಲೆ ತರಬಹುದಾಗಿತ್ತು ಅಂತ ರಗಳೆ ರಾದ್ಧಾಂತ ಮಾಡಿಬಿಟ್ಟೆಯಲ್ಲೇ. ಈ ಬುದ್ಧಿ ನಿನಗೆ ಆಗಲೆ ಇದ್ದಿದ್ದರೋ?

**ಗೌರಮ್ಮ.**—(ಸ್ವಲ್ಪ ನಕ್ಕು) ಆಗಲೇ ಈ ಬುದ್ಧಿ ಇದ್ದಿದ್ದರೆ, ಈಗ ನಿಮ್ಮ ಕೈಲಿ ಮಾತು ಕೇಳೋಕೆ ಯಾರು ಇರ್ತಾ ಇದ್ದರೂ ಅಂತ. ಅಲ್ಲಾ ಅಂದರೆ, ನಿಮ್ಮ ಸ್ಥಿತಿಗೆ ಇಷ್ಟೊಂದು ಧರ್ಮಮಾಡಿಬಿಟ್ಟಿದ್ದೀರಲ್ಲ. ನಮಗಿಂತ ಎಷ್ಟೆಷ್ಟೋ ಅನುಕೂಲವಿರೋರೆಲ್ಲ ಸುಮ್ಮನಿದ್ದಾರಲ್ಲ. ರುಪಾಯಿರಾಶಿಮೇಲೆ ಕೂತಿರೋರೆಲ್ಲ ತೆಪ್ಪಗಿದ್ದಾರಲ್ಲ, ಎಂಜಲಕೈಲಿ ಕಾಗೆ ಹೊಡೆದರೆ, ಅಗುಳೆಲ್ಲಿ ಕೆಳಕ್ಕೆ ಬೀಳುತ್ತೋ, ಕಾಗೆಯೆಲ್ಲಿ ಅದನ್ನು ಆರಿಸಿಕೊಳ್ಳುತ್ತೋ ಅಂತ. ನನಗೆ ವಜ್ರದ ಓಲೆಯೂ ಬೇಡ, ಒಂದೂ ಬೇಡ. ಅದರಿಂದ ಕಿವಿಯೊಂದೇ ಹೊಳೆಯೋದು. ಈಗ ನೀವು ಧರ್ಮ ಮಾಡಿದ್ದು ಮನಸ್ಸಿಗೇ ಬೆಳದಿಂಗಳು ಬಂದಹಾಗಾಗಿದೆ. ಮೈಯಿ, ಮನಸ್ಸು, ಎಲ್ಲಾ ಅದರ ಬೆಳಕಿನಲ್ಲಿ ಮಿನಗ್ತಾ ಇದೆ. ನಮ್ಮ ಲಲಿತನೇ

ಜೀವವಿರೋ ನನ್ನ ವಜ್ರ. ಅದರ ಬೆಳಕು ನಿಮ್ಮ ಒಳ್ಳೆ ಕೆಲಸದಿಂದ, ನಿಮ್ಮ ಧ್ಯಾನದಿಂದ, ಉಳೀತು.

**ರಾಮಾಜೋಯಿಸ.**—(ಸುಪ್ರೀತನಾಗಿ) ದಾರಿಗೆ ಬಂದೆ. ದಾರಿಗೆ ಬಂದೆ. ರಂಗರಾಯ ರಾಮೂನ ನಡುನೀರಿನಲ್ಲಿ ಕೈಬಿಟ್ಟನಲ್ಲಾ, ಅವನ್ನ ಪರೀಕ್ಷೆ ಆಗೋವರೆಗೂ ನಮ್ಮ ಮನೇಲಿರುವ ಹಾಗೆ ಹೇಳಿದ ದಿನ ನನ್ನ ಮೇಲೆ ತೋಪು ಹಾರಿಸಿ, ಮದ್ದು, ಗುಂಡು ಸುರಿಸಿಬಿಟ್ಟೆಯಲ್ಲಾ! ಈಗ ಹೇಳು. ನಾನು ಮಾಡಿದ್ದು ನ್ಯಾಯ ಹೌದೋ ಅಲ್ಲವೋ?

**ಗೌರಮ್ಮ.**—ಅವನು ನಮಗೆ ಸಹಾಯಮಾಡದೆ ಹೋಗಿದ್ದರೆ ನಮ್ಮ ಲಲಿತು ಉಳೀತಾಲೇ ಇರಲಿಲ್ಲ. ಮಧ್ಯದಲ್ಲಿ ನಾನೂ, ನೀವೂ, ಇಬ್ಬರೂ ಬಾಯಿಲೆ ಬಿದ್ದುಬಿಟ್ಟೆವಲ್ಲಾ. ಆಗ ಮನೇಲಿ ಏನೇನು ಅನಾಹುತವಾಗೋದೋ! ನೀವು ರಾಮೂನ ಕರೆದುಕೊಂಡು ಬಂದದ್ದಕ್ಕೆ ನಿಮಗೂ, ದೇವರಿಗೂ, ಇಬ್ಬರಿಗೂ ಕೈಮುಗೀತೀನಿ ನೋಡಿ. ಆದರೆ....

**ರಾಮಾಜೋಯಿಸ.**—ಏನು ಆದರೆ? ನಿನ್ನ ಮನಸ್ಸು ಬಲಿತ ಚಳ್ಳೇಕಾಯಿ ಕಣೆ. ಅಂಟು, ಅಂಟು. ಹೇಳು, ಹೇಳು. ಅದೂ ಕೇಳೋಣ.

**ಗೌರಮ್ಮ.**—ನಾನು ಹೇಳೋಕೆ ಮುಂಚೆಯೇ ಬೈತೀರಲ್ಲ. ಅಲ್ಲಾ ಅಂದರೆ, ರಾಮು ತಾನೇ, ಅವರ ಮನೇಲಿ ಹಾಗೆ ಮಾಡಬಹುದೋ?

**ರಾಮಾಜೋಯಿಸ.**—ಹ್ಯಾಗೆ ಮಾಡಬಹುದೋ ಅಂತ ನಿನ್ನ ಪ್ರಶ್ನೆ?

**ಗೌರಮ್ಮ.**—ಅಬ್ಬ! ನೀವೇನು ಸಾಮಾನ್ಯರಲ್ಲ ಕಣ್ರಿ. ಮರಳೀ ಹಾಗೆ ಒಂದೂ ಕಾಣದ ಹಾಗೆ ಕೇಳ್ತಾರೆ. ಕೇಳಿ ಸಂತೋಷಪಡಿ. ಹೇಳ್ತೇನೆ. "ಜಗದುದ್ಧಾರನ ಆಡಿಸಿದಳು ಯಶೋದಾ" ಅಂತ ಯಶೋದಮ್ಮನವರು ಹಾಡು ಹೇಳ್ತಾ ಇದ್ದರಂತೆ.

**ರಾಮಾಜೋಯಿಸ.**—ನೀನು ಆ ಹಾಡು ಹೇಳಲಿ ಅಂತ ನಾನು ಹೇಳಿದರೆ, ಮಾತಿನಲ್ಲೇ ಆ ಹಾಡು ಹಾರಿಸಿಬಿಟ್ಟೆಯಲ್ಲ. ನಿನ್ನ ಧ್ವನಿ ಇಂಪಾಗಿದೆ. ಎಲ್ಲಿ, ಹಾಡಿನಿಂದ ಮೊದಲುಮಾಡಿ ಹೇಳು.

**ಗೌರಮ್ಮ.**—ಹೋಗಿ ಅಂದರೆ; ನಿಮಗೆ ಮಾಡೋಕೆ ಕೆಲಸವಿಲ್ಲ. ಖಂಡುಗ ಹೊತ್ತುಕೊಂಡು ಈಗ ಕತೆಹೇಳ್ತಾರೆ. ಮುಂದೆ ನಡೆದ ಹಗರಣ ನಿಮಗೆ ತಿಳಿದೇ ಇದೆಯಲ್ಲ. ರಾಮು ಮಾಡಿದ್ದು ಮಾತ್ರ ಸರಿಯೇನೊ?

**ರಾಮಾಜೋಯಿಸ.**—ಅದು ರಂಗರಾಯರ ಮನೆ ಕಡೆಯೋರ ದೃಷ್ಟಿಯಿಂದಲೂ, ಅವರ ಕಡೆ ಬ್ಯಾರಿಸ್ಟರು ಗೌರಮ್ಮನೋರ ದೃಷ್ಟಿ ಯಿಂದಲೂ, ಸರಿಯಿಲ್ಲ. ಆದರೆ, ರಾಮು ಕಡೆಯಿಂದ ನೋಡಿದರೆ, ಅದೇನೂ ಅಕ್ಷಮ್ಯವಾದ ಅಪರಾಧವಲ್ಲ. ಕ್ಷಮಿಸಿ ಅಂದಮೇಲೂ ಬಿಡದೆ ಅವರು ಹಿಡಿದು ಕಡೆದು, ಅವನು ಮನೆಬಿಟ್ಟು ಓಡೋಹಾಗೆ ಮಾಡಿದ್ದು ನ್ಯಾಯವೆ? ತಪ್ಪು ಒಪ್ಪಿಕೊಂಡೋರ ತಲೆ ಒಡೆದ ಹಾಗೇ ಆಯಿತು.

**ಗೌರಮ್ಮ.**—ಇಷ್ಟಾದರೂ ಒಪ್ಪಿದರಲ್ಲ, ಸದ್ಯ. ಅಲ್ಲಾ, ನನ್ನ ಗೌರಮ್ಮ ಅಂದುಬಿಡೋದೆ ಇಷ್ಟು ದೊಡ್ಡ ಜೋಯಿಸರಾಗಿ?

**ರಾಮಾಜೋಯಿಸ.**—ಅದಕ್ಕೇನೆ? "ಭೋಜ್ಯೇಷುಮಾತಾ" ಅಂತ ಹೇಳೀ ಇದೆ. ಊಟದ ವಿಚಾರದಲ್ಲಿ ಹೆಂಡತಿ ತಾಯಿ ಹಾಗೆ...... ಇಲ್ಲವೇ, ಬಾಯಿತಪ್ಪಿ ಹೊರಟುಹೋಯಿತು. ಈ ಶ್ಲೋಕ ಹೆಂಡತಿ ಹೇಗೆ ನಡೀಬೇಕೂ ಅನ್ನೋಕೆ ಹೇಳಿದ್ದು, ಗಂಡ ಹೆಂಡತೀನ ಅಮ್ಮ ಅನ್ನಲೀ ಅಂತಲ್ಲ. ಇವತ್ತು ಬೇಗ ದೇವರಪೂಜೆ ಮಾಡಿದೆ. ಇನ್ನೂ ಪಾರಾಯಣಕ್ಕೆ ಅಷ್ಟೇನೂ ಹೊತ್ತಾಗಿಲ್ಲ. ನಾನೂ, ನೀನೂ, ಎಷ್ಟು ಹರಟಿದರೂ ಕೇಳೋರೇ ಇಲ್ಲ.

**ಗೌರಮ್ಮ.**—ನೀವು ಬ್ಯಾಲಿಸ್ಟ್ರು ಅಂದದ್ದಕ್ಕೆ ಜ್ಞಾಪಕಬಂತು. ಬಿ.ಎ. ಪರೀಕ್ಷೆ ಆದಮೇಲೆ ಕೃಷ್ಣಮೂರ್ತಿ ಸೀಮೆಗೆ ಹೋಗಿ ಬ್ಯಾಲಿಸ್ಟ ರಾಗಿ ಬರ್ತಾನಂತೆ.

**ರಾಮಾಜೋಯಿಸ.**—ಆಮೇಲೆ ಯಶೋದಮ್ಮನ ಗತಿಯೇನೋ ಕಾಣೆ. ಈಗಲೇ ಅವಳ ತಲೆ ಗಿರ್ರನೆ ತಿರುಗ್ತಾ ಇದೆ. ಪಾಪ! ಪಾಪ! ಆಮೇಲೆ ಅವಳ ಗತಿ? ಹೇಗೂ ನಮ್ಮ ಹುಡುಗಿ ಜಾತಕಕ್ಕೂ ಅವನ ಜಾತ ಕಕ್ಕೂ ಸರಿಬೀಳೋಲ್ಲ. ಸರಿಬಿದ್ದಿದ್ದರೂ ಅವರೆಲ್ಲಿ ಒಪ್ತಾ ಇದ್ದರು. ಕೃಷ್ಣ ಮೂರ್ತಿ ಸೀಮೆಗೆ ಹೋಗ್ತಾನೆಯೇ, ಹಾಗಾದರೆ? ಹೋಗಲಿ, ಹೋಗಲಿ,

ಕುರಿ, ಕೋಳಿ, ತಿಂದು ಜಾತಿಕೆಟ್ಟು ಬರಲಿ. ಇದೆಲ್ಲಾ ಹಾಗಿರಲಿ. ರಾಮು ನಮ್ಮ ಮನೆಗೆ ಬರೋಹಾಗೆ ಕರೆದ್ದಕ್ಕೆ ನನಗೆ ಪೂಜೆಹಾಕಿದ್ದೆಯಲ್ಲಾ. ಅದರ ಮಾತು ಹೇಳು. ನನ್ನ ತಪ್ಪಿಲ್ಲ ತಾನೆ?

**ಗೌರಮ್ಮ.**—ಆಗಲೇ ಹೇಳಿಬಿಟ್ಟೆನಲ್ಲ. ದೇವರೇ ಅವನನ್ನ ಕರೆದು ತಂದ ಹಾಗಾಯಿತು. (ಒಂದೆರಡು ಕ್ಷಣ ಯೋಚಿಸುತ್ತಾ ನಿಂತಿದ್ದು) ನಿಜ, ಅಂದರೆ. ನಾನು ಬುದ್ಧಿಯಿಲ್ಲದೆ ನಿಮ್ಮನ್ನ ಹಳೀತಾ ಇದ್ದೆ. ನಿಮ್ಮ ಒಳ್ಳೆ ಕೆಲಸಾನೂ ಕೆಟ್ಟ ಕೆಲಸ ಅಂತ ಭಾವಿಸಿದ್ದೆ. ಹಾಗೇ ಯೋಚನೆಮಾಡಿ ನೋಡಿದರೆ ನನಗೊಂದು ತೋರುತ್ತೆ, ನೋಡಿ. ದೇವರು ನಮಗೆ ಅನ್ಯಾಯ ಮಾಡಿದ ಅಂತ ನಾವು ಎಷ್ಟೋಸಲ ಅವನನ್ನ ದೂರಿ ದೊಂಬಿಮಾಡಿ ಗೋಳಿಡ್ತೇವಲ್ಲ. ಕಣ್ಣಿಲ್ಲದ ದೇವರು ಅಂತ ಹಾರಾಡ್ತೇವಲ್ಲ. ಇದೂ ನಮ್ಮ ಸೊಟ್ಟ ಬುದ್ಧಿಯಿಂದಲೇ ಇರಬೇಕು ಅಲ್ಲವೇ ಅಂದರೆ?

**ರಾಮಾಜೋಯಿಸ.**—ಭೇಷ್! ಮುತ್ತಿನಂಥ ಮಾತು. ನಿನ್ನ ಈ ಮಾತುಕೇಳಿ, ಇನ್ನು ನಾನು ಇವತ್ತು ಗೀತೆ ಪಾರಾಯಣ ಏಕೆ ಮಾಡಬೇಕು ಅನ್ನಿಸುತ್ತೆ ನೋಡು. ಪಾರಾಯಣ ಬಿಡೋಲ್ಲ. ಮಾತಿಗೆ ಹೇಳಿದೆ.

**ಗೌರಮ್ಮ.**—ಈಗ ನನ್ನ ಉಬ್ಬಿಸೋಕೆ ಪ್ರಾರಂಭ. ಇದಕ್ಕೆ ಬೆರಗಾದೇನೇ, ನಾನು? ನಮ್ಮಮ್ಮ ನನಗೂ ಚೆನ್ನಾಗಿ ಕಿವಿ ಚುಚ್ಚಿದಾಳೇ ಅಂದರೆ. (ವ್ಯಂಗ್ಯವಾಗಿ ಕಿವಿಯ ಹಾಲೆಯನ್ನು ತೋರಿಸುವಳು.)

**ರಾಮಾಜೋಯಿಸ.**—ಖಂಡಿತ ಹಾಗಿಲ್ಲವೇ. ನೀನು ಈಗ ಹೇಳಿದ್ದೇ ದೊಡ್ಡ ಸಿದ್ಧಾಂತ. ಮನೆ ಭಾಷೇಲಿ ಸರಳವಾಗಿ ನೀನು ಹೇಳಿಬಿಟ್ಟೆ. ಅನೇಕರು ದೊಡ್ಡ ದೊಡ್ಡ ಜರತಾರಿ ರುಮಾಲಿನ ಗಂಡಸರಿಗೆ ಕೂಡ ಇದು ತಿಳಿಯೋದಿಲ್ಲ.

**ಗೌರಮ್ಮ.**—ಯಾವಾಗ ನೋಡಿದರೂ "ನಮ್ಮ ತಪ್ಪುಗಳೇ ಬೇಕಾದಷ್ಟಿವೆ. ಇನ್ನೊಬ್ಬರ ಹುಳುಕು ಹುಡುಕೋದಕ್ಕಿಂತ ಅವುಗಳನ್ನ ತಿದ್ದಿಕೊಳ್ಳೋದು ಮೇಲು" ಅಂತ ಹೇಳ್ತಾ ಇದ್ದಿರಿ. ಇವತ್ತು ಹೀಗೇಕೆ ಪ್ರಾರಂಭಿಸಿಬಿಟ್ಟಿರಿ?

**ರಾಮಾಜೋಯಿಸ.**—ಏನುಮಾಡಲಿ? ವೇದದ ಗಂಧವೇ ಇಲ್ಲದೇ ಇದ್ದೂ ವೇದಗಳನ್ನ ಬಯ್ಯೋ ಮಹಾನುಭಾವರೂ ಇದ್ದಾರಲ್ಲಾ ಅಂತ ಸಂಕಟ. ಆ ರಂಗರಾಯ ಮೊನ್ನೆ ಹಾರಾಡಿದ್ದಕ್ಕಿಂತಲೆ? ರಾಮ, ರಾಮ, ವೇದ ವನ್ನ ಸುಡಬೇಕಂತೆ. ಹಿಂದಿನವರು ಹೇಳಿರೋದೆಲ್ಲಾ ಗೊಡ್ಡು ಆಚಾರವಂತೆ.

**ಗೌರಮ್ಮ.**—ಹಿಂದಿನದು ಎಲ್ಲಾ ಸರಿಯಿಲ್ಲ. ದೋಷಗಳೂ ಇವೆ. ಅಂತ ನೀವೇ ಹೇಳ್ತಾ ಇದ್ದಿರಿ.

**ರಾಮಾಜೋಯಿಸ.**—ಗುಣ, ದೋಷ, ಎರಡೂ ಹೇಳಿದ್ದರೆ ಸಂಕಟವೇ ಇರಬೇಕಾಗಿರಲಿಲ್ಲ. ನಾನು ತನ್ನ ದಾರಿಗೆ ಬರಲಿಲ್ಲಾ ಅಂತ ವೇದಶಾಸ್ತ್ರಗಳಿಗೆಲ್ಲಾ ಬೈಗಳವೆ? ಮಧ್ಯಾಹ್ನದ ಮೇಲೆ ಯಾವುದೋ ಕೆಲಸ ವಿತ್ತಂತೆ. ನಾನು ಹನ್ನೊಂದು ಗಂಟೆ ಒಳಗಾಗಿ ಅವರ ತಂದೆಯ ಶ್ರಾದ್ಧ ಪೂರೈಸಿಬಿಡಬೇಕಾಗಿತ್ತಂತೆ. ಪೂರ್ವಾಹ್ನದಲ್ಲಿ ಅಶಾಸ್ತ್ರೀಯವಾಗಿ ಪಿಂಡ ಪ್ರದಾನ ಮಾಡಿಸಿ ನಾನು ಹಾಳಾಗಿಹೋಗಬೇಕಾಗಿತ್ತಂತೆ. ಹಾಗೆ ಮಾಡಿಸೋರು ಎಷ್ಟೋಜನ ಇದ್ದಾರಂತೆ. ಹೀಗೆಲ್ಲಾ ಹಾರಾಡಿದ. ಅದಕ್ಕೇನಂತೆ. ಓಟ್ಲಲ್ಲಿ ದೋಸೆ ಹೊಡೆದು ಬಂದು ಬ್ರಾಹ್ಮಣಾರ್ಥ ಮಾಡುವಂಥ ಪಾಪಿಗಳೂ ಇದ್ದಾರೆ.

**ಗೌರಮ್ಮ.**—ಹೀಗೇಕೆ ಹಾರಾಡ್ತೀರಿ ಅಂದರೆ?

**ರಾಮಾಜೋಯಿಸ**—ನನ್ನ ಹೊಟ್ಟೆ ಸಂಕಟ ಅಷ್ಟು ಹೆಚ್ಚಾಗಿದೆ. ಏನುಮಾಡಲಿ ಹೇಳು, ಏನು ಮಾಡಲಿ? ಬ್ರಾಹ್ಮಣರಲ್ಲಿ ಅನೇಕರು ಬ್ರಹ್ಮ ರಾಕ್ಷಸರಾಗಿಹೋಗಿದ್ದಾರೆ. ಶ್ರಾದ್ಧದ ದಿನವಾದರೂ ಸ್ವಲ್ಪ ನೇಮ ಬೇಡವೆ? ನಾನೇನು ದುಡ್ಡುಕೊಟ್ಟಹಾಗೆಲ್ಲಾ ಕುಣಿದು—ಕರಿತಟ್ಟೆ ಹಾಕಿ ಕೀಲುತಿರುಗಿಸಿದರೆ ಮಂತ್ರ ಕೂಗೋ ಯಂತ್ರ—ಅಂತ ತಿಳಿದನೋ ಹೇಗೋ ಆ ರಂಗರಾಯ! ನಮ್ಮ ತಂದೆ ಮಾತ್ರ ಇದ್ದಿದ್ದರೆ, ರಂಗರಾಯ ಆಡಿದ ಮಾತಿನಲ್ಲಿ ಅವನನ್ನ ಹೊಡೆದೇ ಬಿಡೋರು. ನಾನಾಗೋ ಹೊತ್ತಿಗೆ ಸಹಿಸಿ ಕೊಂಡು ಬಂದೆ. ಅನ್ನೋವಾಗ ಅಂದುಬಿಟ್ಟ. ಈಗ ನನ್ನ ಕಡೆ ವೋಟು ಗಳಿಗೆ ನಾನೆಲ್ಲಿ ಸೊನ್ನೆಸುತ್ತಿಬಿಡ್ತೇನೋ ಅಂತ ಕಣ್ಣು ಕಣ್ಣು ಬಿಟ್ಟನೆ ಯಾವ ದೇವರಿಗೆ ಪ್ರೀತಿಯೊ?

**ಲಲಿತಾಂಬ.**—(ಪ್ರವೇಶಿಸಿ ಆಕಳಿಸುತ್ತ) ಏನಮ್ಮ, ಇದು? ಅಣ್ಣನ್ನ ಏಕಮ್ಮ ರೇಗಿಸೋದು?

**ಗೌರಮ್ಮ.**—(ನಗುತ್ತ) ನಾನೇನೂ ಅನ್ನಲಿಲ್ಲಮ್ಮ ನಿಮ್ಮ ಸಿಂಧೂರ ದಂಥ ತಂದೇನ. ತಾವು ಪುರೋಹಿತ ಮಾಡಿಸೋಕೆ ಒಪ್ಪದೆಹೋದ್ದಕ್ಕೆ ತಮ್ಮ ಪ್ರತಾಪ ತಾವೇ ಹೇಳಿಕೋತಿದ್ದಾರೆ. ನೀನೇನು ಅವರ ಕಡೆಗೆ ಪುಟ್ಟ ಲಾಯರೊ? ಇನ್ನುಮೇಲೆ ತಂದೆ ಮಗಳಿಬ್ಬರೂ ಒಂದು. ನನಗೆ ಬಾಯಿಬೀಗ. ನಾನು ಮಾತನಾಡೋ ಹಾಗೇ ಇಲ್ಲ.

**ರಾಮಾಜೋಯಿಸ.**—ನಿದ್ದೆಯಿಂದ ಎಚ್ಚರವಾಗಿಹೋಯಿತೇ ತಾಯಿ? ಲಲಿತೂನ ಹಾಗೆನ್ನಬೇಡ. ಅವಳು ಲಾಯರಲ್ಲವೇ. ನಮ್ಮ ಮನೆಯ ರಾಜರಾಜೇಶ್ವರಿ.

**ಗೌರಮ್ಮ.**—ಅದಕ್ಕೇ ಹೀಗೆ ಚಿನ್ನವಿಲ್ಲದೆ ಬೆಳ್ಳಿಯಿಲ್ಲದೆ ಮೊಂಡು ಮೊಂಡಾಗಿ ಇಟ್ಟುಕೊಂಡಿದ್ದೀರೇನೊ? ರಾಜರಾಜೇಶ್ವರಿ ಹೀಗೆ ತಾನೆ ಇರಬೇಕು? ಅಲ್ಲವೇ ಅಂದರೆ?

**ರಾಮಾಜೋಯಿಸ.**—ಆಗುವ ಕಾಲ ಬಂದರೆ ಎಲ್ಲಾ ಆಗುತ್ತೆ. ನೀನೂ ಸರಿ. ಪ್ರೀತಿಯನ್ನು ತೂಗೋಕೆ ಒಳ್ಳೆ ತಕ್ಕಡಿಯನ್ನೇ ತೆಗೆದೆ. ನನಗೂ ಬೇಕಾದ ಹಾಗೆ ಹಣವಿದ್ದರೆ ನೋಡಬೇಕಾಗಿತ್ತು, ನನ್ನ ಕೈವಾಡಾನ! ನಾನೇನಾದರೂ ಒಂದು ಬಿಡಿಗಾಸನ್ನಾಗಲಿ ಕೆಟ್ಟ ಕೆಲಸಕ್ಕೆ ಉಪಯೋಗಿಸಿದ್ದೇನೆಯೆ? ಆದರೂ, ಸ್ವಲ್ಪ ಹಿಡಿತಮಾಡಿದ್ದರೂ ಚೆನ್ನಾಗಿತ್ತು. ಮಗು, ಲಲಿತು, ಇನ್ನುಮೇಲೆ ಒಂದು ಪುಟ್ಟ ಪೆಟ್ಟಿಗೆ ಮಾಡಿಕೊ, ತಾಯಿ. ನಾನು ಆಗಾಗ ಅಷ್ಟಷ್ಟು ದುಡ್ಡು ಕೊಡ್ತೇನೆ. ಅದೆಲ್ಲಾ ನಿನ್ನ ಒಡವೆಗೆ.

**ಲಲಿತಾಂಬ.**—(ತಾಯಿಯ ಕಡೆಗೆ ನೋಡಿ) ನೋಡಿದೆಯೋ ಅಣ್ಣನ ಪ್ರೀತಿ ಹೇಗಿದೆ? ಈಗ ಸ್ವಲ್ಪ ದಿನಗಳಿಂದ ಇರುವ ಹಾಗೇ ಮುಂದೂ ಇದ್ದುಬಿಡಮ್ಮ. ಮನೇಲಿ ಸದ್ದುಗಲಗೇ ಇರೋದಿಲ್ಲ. ಹಾಯಾಗಿ ನಿದ್ದೆ ಮಾಡಿಬಿಡಬಹುದು.

(ದಂಪತಿಗಳಿಬ್ಬರೂ ನಗುವರು. ರಾಮಾಜೋಯಿಸನು ಕೃಷ್ಣಾಜಿನದ ಮೇಲೆ ಕುಳಿತು ಪಾರಾಯಣಕ್ಕಾಗಿ ಗೀತೆಯ ಪುಸ್ತಕವನ್ನು ತೆರೆಯುವನು. ಲಲಿತಾಂಬ ಅವನಿಗೆ ಸ್ವಲ್ಪದೂರದಲ್ಲಿ ಕುಳಿತುಕೊಳ್ಳುವಳು.)

**ರಾಜಾರಾಯ.**—("ಗೌರಮ್ಮಾ, ಗೌರಮ್ಮಾ" ಎಂದು ಗಟ್ಟಿಯಾಗಿ ಕೂಗಿಕೊಂಡು ಪ್ರವೇಶಿಸಿ) ಏನು, ಮನೇಲಿ ಮೂರು ಜನ ಇದ್ದೀರಿ. ಒಬ್ಬರಾದರೂ "ಆ" ಅನ್ನಬಾರದೆ? ದೇವರು ಢಡಿಗಂಟಲು ಕೊಟ್ಟಿರೋ ಹೊತ್ತಿಗೆ ಹೀಗೆ ಕೂಗುಹಾಕಿದ ಮೇಲೂ ಇನ್ನೂ ಬದುಕಿದ್ದೀನಿ.

**ಗೌರಮ್ಮ.**—ಎರಡುಸಲ ಕೂಗುಹಾಕಿದ್ದಕ್ಕೆ ಎಷ್ಟು ಜಂಭ ಹೊಡೀತಾರೋ ಡಾಕ್ಟರು! ನಿಮ್ಮ ಗಂಟಲು ಸವೆದುಹೋಯಿತು, ಅಲ್ಲವೆ? ನಾವು "ಆ" ಅನ್ನೋ ಅಷ್ಟರಲ್ಲೇ ಒಳಕ್ಕೆ ಬಂದುಬಿಟ್ಟಿರಿ. (ಹೀಗೆಂದು ಹೇಳುತ್ತ ಮೂಲೆಯಲ್ಲಿರುವ ಮಂದಲಿಗೆಯನ್ನು ಹಾಸುವಳು.)

**ರಾಮಾಜೋಯಿಸ.**—ನಾನು ಎಷ್ಟೋ ಜನ ಡಾಕ್ಟರುಗಳನ್ನ ನೋಡಿದ್ದೀನಿ. ನಿಮ್ಮಷ್ಟು ಗುಣವಂತರನ್ನ ಬೇರೆ ನೋಡಿಲ್ಲ. ಗುಣ ದೊಡ್ಡದು ಸ್ವಾಮಿ, ಗುಣವೇ ದೊಡ್ಡದು. ಏನುಗುಣ, ಏನು ನಡತೆ! ಹಸ್ತಗುಣ, ಎಷ್ಟು, ಏನು ಕಥೆ?

**ರಾಜಾರಾಯ.**—(ಅರ್ಧ ಸಂತೋಷವನ್ನೂ, ಅರ್ಧ ಹಾಸ್ಯವನ್ನೂ ಸೂಚಿಸುವ ಧ್ವನಿಯಿಂದ) ಅಲ್ಲವೆ, ಅಲ್ಲವೇ ಮತ್ತೆ! ನಿಮ್ಮಂಥ ಪೆಚ್ಚುಗಳು ಹೊಗಳಿ ಹೊಗಳಿ ನನಗೆ ಹುಚ್ಚುಹಿಡಿಸಿಬಿಡ್ತೀರಿ. ಇದೆಲ್ಲಾ ಹೋಗಲಿ: ಏನಮ್ಮ, ಗೌರಮ್ಮ, ಬಹಳ ಘಾಬರೀಲಿ ಜೈಲು ವಾರಂಟು ಕಳಿಸಿಬಿಟ್ಟೆಯಲ್ಲಾ, ಯಾರಿಗೆ ಏನಾಗಿದೆ?

**ಗೌರಮ್ಮ.**—ಲಲಿತ, ಯಾಕೋ ಸಂಕಟ ಅಂತ ಹೇಳಿದಳು. ಬಿಸಿ ಬಿಸಿಯಾಗಿ ಅನ್ನಾನೂ, ಹುಣಿಸೇಸಾರೂ ಮಾಡಿಟ್ಟೆ. ಊಟಮಾಡಿ ಸಂಕಟ, ಸಂಕಟ ಅಂತ ಹೇಳಿ ಮಲಗಿ ನಿದ್ದೆಮಾಡಿದಳು. ಘಾಬರಿಯಿಂದ ಹೇಳಿಕಳುಹಿಸಿದೆ.

**ರಾಜಾರಾಯ.**—ಏನು ಸಂಸಾರಮಾಡ್ತೀರೇ ನಮ್ಮಪ್ಪ! ಮುವ್ವತ್ತು ಮುವ್ವತ್ತೈದು ವರುಷಕ್ಕೆ ಬಂದಿರಬಹುದು. ಇನ್ನೂ ನಿಂಗೆ

ಒಂದೂ ತಿಳಿಯದಲ್ಲಾ. ಹುಡುಗಿ ವಿಷಮಶೀತ ಜ್ವರದಿಂದ ಎದ್ದಿದ್ದಾಳೆ. ಅನ್ನ ಬೀಳೋಕೆ ಮುಂಚೆ ಹಸಿವಿನ ಸಂಕಟ. ಅನ್ನ ಬಿದ್ದಮೇಲೆ ಉಂಡ ಸಂಕಟ. ಇಷ್ಟು ತಿಳಿಯಬೇಡವೇ. ಆದರೂ ನೀನೇ ವಾಸಿ. ನಿಮ್ಮ ಊರಿನೋರು ಆ ದೊಡ್ಡಮನೆ ರಂಗರಾಯರು ಇದ್ದಾರಲ್ಲ—ಅವರು ಅಂದರೆ, ಆ ದೊಂದಿ ಮಿಸೆ ರಂಗರಾಯರು—ಅವರ ಕುಟುಂಬ ಯಶೋದಮ್ಮನವರು—ಅವರಿಗಿಂತ ನೀನು ವಾಸಿ. ದೇವರದಯೆ ಯಿಂದ ಅವಳಷ್ಟು ನಾಗರಿಕತೆ ನಿನಗಿನ್ನೂ ಬಂದಿಲ್ಲ. ಹೇಳಿದ ಹಾಗೆ ಕೇಳ್ತೀಯೆ. (ನಕ್ಕು) ಅಲ್ಲಾ, "ಆಲೂಗೆಡ್ಡೆ ಸಿಪ್ಪೆ ಸಹಿತ ಉಪಯೋಗಿಸಿ ಪಲ್ಯಾ ಮಾಡಿಕೊಂಡು ತಿನ್ನಮ್ಮ. ಸಿಪ್ಪೆ ತೆಗೆದುಹಾಕಿದರೆ ಮೈಗೆ ಒಳ್ಳೆಯದಲ್ಲ, ಅಂತ ನಾನು ಹೇಳಿದರೆ, (ಕೀರಲು ಧ್ವನಿಯಿಂದ ಅಣಕಿಸಿ ಮಾತನಾಡುತ್ತ) "ಸಿಪ್ಪೆ ಗಂಟಲಲ್ಲಿ ಸಿಕ್ಕೊಂಡ್ಬಿಟ್ರೋ ಡಾಕ್ಟರೇ ?" ಅಂತ ಹೇಳಿದಳು. ನನಗೆ ನಕ್ಕೂ ನಕ್ಕೂ ಸಾಕಾಯಿತು. ಸೊಪ್ಪು ತಿನ್ನಬೇಕು ಅಂದರೆ ಕಣ್ಣು ಕಣ್ಣುಬಿಟ್ಟಳು. ನಾನೇನೂ ಅವಳನ್ನ ಹಿಂದೆ ದೂರ್ತಾ ಇಲ್ಲ. ಎಲ್ಲರೆದುರಿಗೇ ಅವಳಿಗೆ ಎಷ್ಟೋಸಲ ಹೇಳಿ ದ್ದೀನಿ. (ಗೌರಮ್ಮನು ಹೋಗುವಳು.) ಜೋಯಿಸರೆ, ನಿಮ್ಮೂರು ರಂಗ ರಾಯ ನಿಮಗೆ ತನಗೋಸ್ಕರ ಸಿಫಾರಸು ಹೇಳು ಅಂತ ತಿಳಿಸಿದ್ದಾನೆ. ನಿಮ್ಮ ವೋಟನ್ನೂ, ನಿಮ್ಮ ಜಮಿನುಗಳು ಇರೋ ಊರುಗಳವರ ವೋಟನ್ನೂ ಅವನಿಗೇ ಕೊಡಿಸಬೇಕಂತೆ. ನೀನೇ ಕೇಳು ಅಂದೆ. ನೀವೂ ಹೇಳಿ ಅಂದ. ಹೇಳಿದ್ದೇನೆ. ಸರೀ ತಾನೆ ?

**ರಾಮಾಜೋಯಿಸ.**—ಆಗಲಿ, ಆಗಲಿ, ಯೋಚಿಸಿ ನೋಡೋಣ. ಯಾರು ಹೇಳಿದರೆ ತಾನೇ ಏನು !

**ರಾಜಾರಾಯ.**—ನೀವು ಹೇಳೋ ಧ್ವನಿ ನೋಡಿದರೆ ಆತನಿಗೆ ಚಕ್ಕರೋ ಏನೋ! ಕೊಡಿ ಸ್ವಾಮಿ, ಆತನೂ ಸಭೆಗೆ ಹೋಗಲಿ. ಶುಕ್ರಾಚಾರ್ಯರ ಹಾಗೆ ಅಡ್ಡ ಬರಬ್ಯೇಡಿ.

**ಗೌರಮ್ಮ.**—(ಒಂದು ಬೆಳ್ಳಿಯ ಲೋಟದೊಡನೆ ಪ್ರವೇಶಿಸಿ) ಕುಡೀರಿ, ಡಾಕ್ಟರೆ.

**ರಾಜಾರಾಯ.**—ಅದೇನು ಕಾಫಿಯೋ? ಬಿಸಿಲು ಧಗೆ ಉರೀತ್ತಾ ಇದ್ದೆ. ನಾನು ಗೋಳಾಡಲಿ ಅಂತ ತಂದಿದ್ದೀಯೋ ಹೇಗೆ? ಈ ಕಾಫಿ ಕುಡಿಯೋ ರೋಗ ಲಾಂಟಾನಾ ಗಿಡಗಳ ಹಾಗೆ ಆವರಿಸಿಕೊಂಡುಬಿಟ್ಟಿದ್ದೆ, ನೋಡಿ. ಬಹಳ ಅನ್ಯಾಯ, ಬಹಳ ಅನ್ಯಾಯ, ಸ್ವಾಮಿ.

**ರಾಮಾಜೋಯಿಸ.**—ನಿಮ್ಮ ಹತ್ತಿರಕ್ಕೆ ಔಷಧಕ್ಕೆ ಬರೋರಿಗೆಲ್ಲಾ ಕಾಫಿ ಬಿಡಿ ಅಂತ ಹೇಳಬಾರದೆ?

**ರಾಜಾರಾಯ.**—ನಾನು ಹೇಳಬೇಕಾದ್ದೇ ಇಲ್ಲ. ಅವರಾಗಿಯೇ ಬಿಡ್ತಾ ಇದ್ದಾರೆ. ಗಂಟಲ ಕೆಳಕ್ಕೆ ಯಥೇಷ್ಟವಾಗಿ, ಸುಖೋಷ್ಣವಾಗಿ, ಅವರೇ ಬಿಡ್ತಾ ಇದ್ದಾರೆ, ಸ್ವಾಮಿ.

**ಗೌರಮ್ಮ.**—ಇದು ನಿಂಬೆಹಣ್ಣಿನ ಪಾನಕ. ನೀವು ಬರ್ತೀರಿ ಅಂತಲೇ ಮಾಡಿಟ್ಟಿದ್ದೆ. (**ಕೊಡುವಳು**)

**ರಾಜಾರಾಯ.**—ಸದ್ಯ ನಿನ್ನ ಮಾನ ಉಳಿಸಿಕೊಂಡೆ. (**ಪಾನಕ ಕುಡಿದು**) ಏನೋ, ಈ ದಾಸನಲ್ಲಿ ನೀವೆಲ್ಲಾ ಅಕ್ಕತಂಗಿಯರು ಅಣ್ಣತಮ್ಮಂದಿರ ಹಾಗಿದ್ದೀರಿ. ಭಗವಂತ ಎಲ್ಲರನ್ನೂ ಸುಖವಾಗಿಟ್ಟಿರಲಿ. ನಾನೇನೋ ಬಡಬಡನೆ ಅಂದುಬಿಡ್ತೀನಿ. ಎಲಾ, ಜನಗಳು ತಾವು ಸುಲಭವಾಗಿ ತಪ್ಪಿಸಿಕೊಳ್ಳೋದು ಸಾಧ್ಯವಿರೋ ರೋಗಗಳಿಗೇ ಸಿಕ್ಕಿಬಿದ್ದು ಕಷ್ಟ ಪಡ್ತಾರಲ್ಲಾ, ತಿಳಿಯದೆ ಕೆಲವರು, ನಾಗರಿಕತೆ ಅಂತ ಕೆಲವರು, ಅಂತೂ ಅನೇಕರು ಮಾಡಬಾರದ ಅಪಥ್ಯ ಮಾಡಿಕೊಂಡು, ತಿನ್ನಬಾರದ್ದನ್ನ ತಿಂದು, ಸಂಕಟಪಡ್ತಾರಲ್ಲಾ ಅನ್ನೋ ಸಂಕಟಕ್ಕೆ ಹೊಟ್ಟೆ ಉರಿ ಸಹಿಸಲಾರದೆ ನಾನು ಅಂತೇನೇ ಹೊರತು ಮತ್ತೇನೂ ಇಲ್ಲ, ತಾಯಿ. ಈ ಹಾಳು ರಾಜಾರಾಯ ಒರಗಿಹೋದರೆ, ಎಷ್ಟೋ ಜನಕ್ಕೆ ನೆಮ್ಮದಿ. ಹಾಯಾಗಿರಬಹುದು.

**ರಾಮಾಜೋಯಿಸ.**—(**ಕಿವಿಗಳನ್ನು ಮುಚ್ಚಿಕೊಂಡು**) ಶಾಂತಂ ಪಾಪಂ! ಶಾಂತಂ ಪಾಪಂ. ರಾಮ, ರಾಮ, ಹಾಗೆಲ್ಲಾ ಹೇಳಬೇಡಿ. ನಿಮ್ಮ ಮನಸ್ಸು ಎಂಥ ಒಳ್ಳೆ ಮನಸ್ಸು ನೋಡಿ. ನಿಮ್ಮ ವಿಷಯದಲ್ಲಿ ನಮಗೇನೊ ಪ್ರೀತಿವಿಶ್ವಾಸಗಳು ಹೆಚ್ಚಾಗೇ ಇವೆ.

**ರಾಜಾರಾಯ.**—(ನಗುತ್ತಾ) ನೀವು, ನಿಮ್ಮ ಹೆಂಡತಿ, ನಿಮ್ಮ ಮಗಳು, ಆ "ನರಸಮ್ಮ", ನಾಲ್ಕು ಜನವೂ ಸೇರಿ ನಿನ್ನೆಯೇ ನನಗೆ ಸೋಬಲಕ್ಕಿ ಇಟ್ಟುಬಿಟ್ಟಿರಲ್ಲಾ, ಇನ್ನುಮೇಲೆ ನಮ್ಮ ಮನೆಗೆ ಬರಬೇಡ ಅಂತ. ಈಗ ಹೀಗೆ ಹೇಳ್ತೀರಿ?

**ರಾಮಾಜೋಯಿಸ.**—ಹಾಗೆಂದರೇನು ಸ್ವಾಮಿ? ನನಗೆ ಅರ್ಥವಾಗಲಿಲ್ಲ.

**ರಾಜಾರಾಯ.**—ಪಾಪ, ಪಾಪ, ನಿಮಗೆಲ್ಲಿ ಅರ್ಥವಾಗುತ್ತೆ. ಅಷ್ಟೊಂದು ಹುವ್ವು, ಹಣ್ಣು, ಚಿನ್ನದ ಉಂಗರ, ಎಲ್ಲಾ ಕಳಿಸಿದ್ದಕ್ಕೆ ಇನ್ನೇನು ಅರ್ಥ? ನೀನು ದೊಡ್ಡಮನುಷ್ಯ, ಇನ್ನುಮೇಲೆ ನಮ್ಮ ಮನೆಗೆ ಬರಬೇಡ ಅಂತ ತಾನೆ?

**ರಾಮಾಜೋಯಿಸ.**—(ಸ್ವಗತ) ಚಿನ್ನದ ಉಂಗರ, ಚಿನ್ನದ ಉಂಗರ! ಅಬ್ಬ, ರಾಮು ಎಂಥಾ ಕೆಲಸಮಾಡಿದ್ದಾನೆ. (ಪ್ರಕಾಶ) ಉಂಟೆ. ಉಂಟೆ. ಹಾಗುಂಟೆ.

**ರಾಜಾರಾಯ.**—(ನಗುತ್ತ) ಏನು ಉಂಟೇನೋ, ಏನು ಕುಂಟೇನೋ! ನೀವು ಕೃತಯುಗದ ಮನುಷ್ಯರು ಸ್ವಾಮಿ. ತಪ್ಪಿ ಹುಟ್ಟಿದ್ದೀರಿ ಈ ಕಲಿಯುಗದಲ್ಲಿ. ನಾನು ಹೊರಡ್ತೀನಿ. ಬಹಳ ತೊಂದರೆ ತೆಗೆದುಕೊಂಡಿರಿ, ಅಂತ ನಾನೇ ಬಂದು ಹೇಳಬೇಕೂ ಅಂತಿದ್ದೆ. ಶುದ್ಧ ಹೃದಯದಿಂದ ನೀವು ಅದೆಲ್ಲಾ ಕಳುಹಿಸಿದ್ದು ನೋಡಿ "ಧನ್ಯೋಸ್ಮಿ" ಅಂದುಕೊಂಡೆ. ಲೇ, ಲಲಿತಮ್ಮ, ಹಸಿವಾದ್ದೇ ಸಾಕು ಅಂತ ತುಗರಿನುಚ್ಚಿನುಂಡೆ, ಹಲಸಿನ ಹಣ್ಣು, ಆಂಬೋಡೆ, ಎಲ್ಲಾ ಬಡಿದುಬಿಟ್ಟು ನನ್ನ ಪ್ರಾಣಕ್ಕೆ ತಂದುಬಿಟ್ಟೀಯೆ. ಜೋಕೆ. (ಮೇಲಕ್ಕೆದ್ದು) ಅದು ಸರಿ. ಆ ನರಸಮ್ಮ ಎಲ್ಲಿ, ಜೋಯಿಸರೆ?

**ರಾಮಾಜೋಯಿಸ.**—ನರಸಮ್ಮ, ನರಸಮ್ಮ ಯಾರು?

**ರಾಜಾರಾಯ.**—ನೀವೊಬ್ಬರು ಶುದ್ಧಗೊಡ್ಡು, ಜಡಭರತರುಷಿಗಳು.

**ರಾಮಾಜೋಯಿಸ.**—ಆ ಮಹಾನುಭಾವರ ಯೋಗ್ಯತೆ ನನಗೆಲ್ಲಿ? ನರಸಮ್ಮ ಯಾರೂ ನಮ್ಮ ಮನೇಲಿಲ್ಲವಲ್ಲ.

**ರಾಜಾರಾಯ.**—(ನಗುತ್ತ) ರಾಮಚಂದ್ರನ್ ಅಂತ ಟೊಣಪ್ಪ ಶಿಷ್ಯ ಸಿಕ್ಕಿದ್ದಾನಲ್ಲ, ಅವನ ಮಾತು ನಾನು ಹೇಳಿದ್ದು. ನೀವು ದಂಪತಿಗಳು ಕೂಡ ಕಾಯಿಲೆ ಬಿದ್ದಿರಿ. ಅವನು ಮಾತ್ರ ಇಲ್ಲದೆಹೋಗಿದ್ದರೆ ಏನು ಹಗರಣವಾಗ್ತಾ ಇತ್ತೊ. ಅವನ ಬೋಧನೆ ಇಲ್ಲದೆ ಹೋಗಿದ್ದರೆ, ನಿಮ್ಮ ಕುಟುಂಬ, ನಿಮ್ಮ ಗೃಹಿಣಿ, ನಿಮ್ಮ ಸಹಧರ್ಮಿಣಿ, ನಿಮ್ಮ ಆಕಿ, ನಿಮ್ಮ ಹೆಂಡತಿ ಗೌರಮ್ಮ, ನನ್ನ ಮಾತು ಒಂದೂ ನಡಿಸ್ತಾ ಇರಲಿಲ್ಲ. ಕೊನೆಗೆ ಕಿಟಕಿ ಬಾಗಿಲು ತೆಗೆದಿರೋಕೆ ಕೂಡ ಅವಳಿಗೆ ದಿಗಿಲು. ಅದಕ್ಕೇ ನಾನು ಅವನಿಗೆ ಸರಸಮ್ಮನೆಂದು ಹೆಸರಿಟ್ಟಿದ್ದೀನಿ. ಹತ್ತು "ನರ್ಸು"ಗಳಿದ್ದರೂ ಅವನಷ್ಟು ಕೆಲಸ ಅಷ್ಟು ಚೆನ್ನಾಗಿ ನಡೀತಾ ಇರಲಿಲ್ಲ. ನಾನು ಹೋಗಿಬರ್ತೀನೆ. ನಮಸ್ಕಾರ.

(ರಾಮಾಜೋಯಿಸನೂ ಕೈಮುಗಿಯುವನು. ರಾಜಾರಾಯನು ಹೊರಟುಹೋಗುವನು.)

**ರಾಮಾಜೋಯಿಸ.**—ರಾಮು ಎಂಥ ರತ್ನದಂಥ ಹುಡುಗ! ರಂಗರಾಯನ ಮನೆಯೋರಲ್ಲಿ—ಅದೂ ಯಶೋದಮ್ಮನಲ್ಲಿ—ಕ್ಷಮಾ ಗುಣವೆ ಇಲ್ಲವಲ್ಲ! ಬದನೇಕಾಯಿ ಬ್ರಹ್ಮರಾಕ್ಷಸ ಮಾಡಿ ಓಡಿಸಿಬಿಟ್ಟರು. ನೋಡೆ, ನಮಗೆ ತಿಳಿಯದ ಹಾಗೆ ಡಾಕ್ಟರಿಗೆ ಉಂಗುರ ಕೊಟ್ಟು ಬಂದಿದ್ದಾನೆ. ಅದು ಗೋಪು ಹಾಕ್ಕೊಳ್ತಾ ಇದ್ದ ಉಂಗುರ. ನಾವು ಬರೀ ಹಣ್ಣು ಕಳಿಸಿದ್ದು ಸರಿಯಲ್ಲ. ಈಗ ತೋರುತ್ತೆ ನನಗೆ. "ವಿಪ್ರಾಃ ಪಶ್ಚಿಮ ಬುದ್ಧಯಃ" ಅನ್ನೋದು ಅದಕ್ಕೇ ಮತ್ತೆ.

**ಗೌರಮ್ಮ.**—ಲಲಿತು! ರಾಮು ನಿನ್ನ ಚೆನ್ನಾಗಿ ನೋಡಿಕೊಂಡ, ಅಲ್ಲವೇನೆ?

**ಲಲಿತಾಂಬ.**—ಹಾಗೆ ನೋಡಿಕೊಳ್ಳೋರಿದ್ದರೆ ಕಾಯಿಲೆಯೂ ಸುಖ ಅನ್ನಿಸುತ್ತೆ. ನನ್ನಿಂದ ನಿಮಗೆಲ್ಲಾ ಎಷ್ಟೋದಿನ ಊಟ, ನಿದ್ದೆ, ಯಾವುದೂ ಸರಿಯಾಗಿ ನಡೀದೇ ಹೋಯಿತು.

**ಗೌರಮ್ಮ.**—ರತ್ನದಂಥ ಹುಡುಗ ಅಂದರೆ. ಲಲಿತು ಮದುವೆಗೆ ನೆರೆದಿದ್ದಾಳೆ. ಲಲಿತು! ರಾಮೂನ ಮದುವೆಯಾಗ್ತೀಯೇನೆ?

**ಲಲಿತಾಂಬ.**—(ಲಜ್ಜೆಯಿಂದ) ಥೂ, ಹೋಗೆ ಅಮ್ಮ, ಹೋಗೆ. (ಎದ್ದು ಹೊರಟುಹೋಗುವಳು.)

**ಗೌರಮ್ಮ.**—(ನಗುತ್ತ) ನನ್ನ ಹೋಗೇ ಅಂತ ತಾನೇ ಹೊರಟು ಹೋದಳು. ಇಲ್ಲಿ ಬಾರೇ ಅಮ್ಮ, ಸ್ವಲ್ಪ.

**ರಾಮಾಜೋಯಿಸ.**—ನಾವು ಎರಡು ತಿಂಗಳಿಂದ ಅನ್ನಾ ಹಾಕಿದ್ದೇ ಇದಕ್ಕೋಸ್ಕರ ಅಂತ ರಾಮು ಭಾವಿಸಿಕೊಂಡಾನು. ಅವ ನೆದುರಿಗೆ ಈ ಸುದ್ದಿಯೇ ಎತ್ತಬಾರದು. ತಿಳೀತೋ?

**ಗೌರಮ್ಮ.**—ತಿಳೀತು. ಆದರೆ ನಿಮ್ಮ ಮಗಳಿಗೆ ಹತ್ತು ವರುಷ ತುಂಬಿಹೋಯಿತು. ಗಂಡೇ ಗೊತ್ತುಮಾಡಿಲ್ಲವಲ್ಲ.

**ರಾಮಾಜೋಯಿಸ.**—ಸದ್ಯ ಈ ಸಲದ ಗಂಡಾಂತರವು ಕಳೆಯಿ ತಲ್ಲ. ಇನ್ನು ನಿಧಾನವಾಗಿ ಮದುವೆ ಮಾಡೋಣ. ಅವಸರವೇನಂತೆ.

**ಗೌರಮ್ಮ.**—ಇನ್ನು ತಡಮಾಡಿದರೆ ಬ್ರಾಹ್ಮಣಿಕೆ ಉಳಿಯು ತ್ತೆಯೆ?

**ರಾಮಾಜೋಯಿಸ.**—ಯಜ್ಞ ಯಾಗಾದಿಗಳನ್ನು ಮಾಡದೆ ಇದ್ದೂ ಉಳಿದಿರುವ ಬ್ರಾಹ್ಮಣಿಕೆ, ಧಾರ್ಯಾಗ್ನಿಯನ್ನಿಡದೆ ತಪ್ಪಿದ್ದೂ ಉಳಿ ದಿರುವ ಬ್ರಾಹ್ಮಣಿಕೆ, ಇನ್ನು ಒಂದೆರಡು ವರುಷ ಹುಡುಗಿ ಲಗ್ನ ತಡ ಮಾಡಿದರೆ ಹಾರಿಹೋದೀತೆ? ತೀರ ತಡಮಾಡಿ ಋತುಮತಿ ವಿವಾಹ ಮಾಡೋದೂ ಬೇಡ. ತೀರ ಆತುರಬಿದ್ದು ಬೊಂಬೆ ಮದುವೆ ಮಾಡೋದೂ ಬೇಡ. "ಅತಿ ಸರ್ವತ್ರ ವರ್ಜಯೇತ್" ಎಂಬುದು ಒಳ್ಳೆಯ ಸೂತ್ರ.

**ಗೌರಮ್ಮ.**—ಸೂತ್ರವೋ, ಧೋತ್ರವೋ! ಗಂಡಿನ ಮಾತು ಮೊದಲು ಹೇಳಿ.

**ರಾಮಾಜೋಯಿಸ.**—ರಾಮು ಸಮಾನವಿಲ್ಲ. ಎಂಥೆಂಥ ಅಭಿ ಪ್ರಾಯವಿದೆಯೋ ಅವನಿಗೆ! ಪಟ್ಣಗಳಲ್ಲಿ ಹಣ ಸಂಪಾದಿಸಬೇಕಂತೆ. ಹಳ್ಳಿ ಯಲ್ಲಿ ಸೇರಿ ಹಳ್ಳಿಯವರಿಗೆ ಅನುಕೂಲಮಾಡಿಕೊಟ್ಟು, ನಾವೂ ಸುಖ ವಾಗಿ ಬಾಳಿ, ಅವರನ್ನೂ ಸುಖಪಡಿಸಬೇಕಂತೆ. ಹಿಂದಿದ್ದ ಹಾಗೆ ರಾಟೆ

ಹಿಡಿದು ನೂಲು ತೆಗಿಸಬೇಕಂತೆ. ಹಳ್ಳಿಯವರಿಗೆ ಓದು ಕಲಿಸಿ ಒಳ್ಳೆಯ ಮಾರ್ಗದಲ್ಲಿಡಬೇಕಂತೆ. ಆದಷ್ಟು ದೇಶಸೇವೆ ಮಾಡಬೇಕಂತೆ. ಮುತ್ತು ರತ್ನಗಳಂಥ ಮಾತುಗಳು ಅವನವು. ಗೋಪು ಇದ್ದಿದ್ದರೆ!

**ಗೌರಮ್ಮ.**—ಆ ಮಾತು ಹಾಗಿರಲಿ. ನನ್ನ ಮಾತಿಗೆ ಉತ್ತರ ಹೇಳಿ.

**ರಾಮಾಜೋಯಿಸ.**—"ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ" ಅಂದಹಾಗೆ ಮಾಡಬಾರದು. ಪೂರ್ಣ ಭರವಸೆಯಿಟ್ಟು ಭಗವಂತನನ್ನು ನಂಬಬೇಕು. ನಿನ್ನದು ಮಹಾ ಚಪಲಚಿತ್ತ. ಮಹಾ ಚಪಲ ಚಿತ್ತ. ದೇವರಿದ್ದಾನೆ. ಸುಮ್ಮನಿರು.

**ವೆಂಕಪ್ಪ.**—(ಪ್ರವೇಶಿಸಿ) ಜೋಯಿಸರೇ, ಅಜ್ಜಿಗೆ ಉಸಿರು ಎಳೀತಾ ಇದೆ. ಅಪ್ಪ, ಗಂಗೆ ತರಹೇಳಿದ.

**ಗೌರಮ್ಮ.**—ಅಯ್ಯೋ ಪಾಪ! ಕೊನೆಗೂ ಇಲ್ಲಿಗೆ ಬಂತೆ!

**ರಾಮಾಜೋಯಿಸ**—ಪಾಪ, ಬಹಳ ನರಳಿದರು. ನಮಗೆಲ್ಲಾ ಯಾವ ಹೊತ್ತಿಗೇನೋ. ಎಲ್ಲಾ ಮೂರು ದಿನದ ಬಾಳು. ಅಷ್ಟಕ್ಕೇ ಕೆಲವರ ಬಡಾಯಿಗೆ ಕೊನೆ ಮೊದಲೇ ಇಲ್ಲ. ವೆಂಕಪ್ಪ! ನಡಿಯಣ್ಣ, ಮಡೀಲೇ ಇದ್ದೇನೆ. ನಾನೇ ಗಂಗೆ ಸ್ಥಾಲಿ ತೆಗೆದುಕೊಂಡು ಬರ್ತೇನೆ. (ವೆಂಕಪ್ಪನು ಹೊರಟುಹೋಗುವನು. ರಾಮಾಜೋಯಿಸನು ಒಳಕ್ಕೆ ಹೋಗಿ ಗಂಗೆಯ ಸ್ಥಾಲಿಯನ್ನು ಹಿಡಿದುಕೊಂಡು ಬರುವನು.)

**ಗೌರಮ್ಮ.**—ನಾನೂ ಬಂದು ಅಜ್ಜಮ್ಮನ ಮುಖ ನೋಡಿಕೊಂಡು ಬರ್ತೇನೆ. ಅವರಿದ್ದದ್ದು ನಮ್ಮ ಬೀದಿಯಲ್ಲೇ ಎಲ್ಲರಿಗೂ ಎಷ್ಟೋ ದಿಕ್ಕಾಗಿತ್ತು. ಹಳಬರು ಹೋದಮೇಲೆ ನಮ್ಮನ್ನು ಕೇಳೋರ್ಯಾರು! (ನಿಟ್ಟುಸಿರುಬಿಟ್ಟು) ಇನ್ನು ಆ ವಿಶ್ವಾಸ ಎಲ್ಲಿ ಕಾಣಬೇಕು. ನಾನೂ ಬರ್ತೇನೆ.

**ರಾಮಾಜೋಯಿಸ.**—ಮನೆಯಲ್ಲಿ ಲಲಿತು ಒಬ್ಬಳೇ ಇರಬೇಕಾಗುತ್ತಲ್ಲ. ರಾಮುವೂ ಇನ್ನೂ ಬಂದಿಲ್ಲ.

**ಲಲಿತಾಂಬ.**—(ಪ್ರವೇಶಿಸಿ) ನನಗೇನು ಭಯ! ಹೋಗಿಬನ್ನಿ. (ಕುತೂಹಲದಿಂದ) ನಾನೂ ಬರಲೆ?

**ರಾಮಾಜೋಯಿಸ.**—(ಸ್ವಲ್ಪ ಅನುಮಾನಿಸಿ) ಬೇಡ, ತಾಯಿ. ನಾವೇ ಬೇಗ ಬಂದುಬಿಡ್ತೇವೆ. ಬಾಗಿಲು ಹಾಕಿಕೊ. (ರಾಮಾಜೋಯಿಸನೂ, ಗೌರಮ್ಮನೂ ಹೊರಟುಹೋಗುವರು. ಲಲಿತಾಂಬ ಬಾಗಿಲು ಹಾಕಿಕೊಂಡು ಬಂದು, "ಪ್ರೇಮಾ ಕೈಸಾರಾ ಶುಭಾ ಆಕಾರಾ ಮೋಹಾಕರಾ" ಎಂಬ ಹಾಡನ್ನು ಹೇಳುತ್ತ ನಿಲ್ಲುವಳು. ರಾಮಚಂದ್ರ ಆ ಹಾಡು ಮುಗಿದ ಬಳಿಕ "ಬಾಗಿಲು, ಬಾಗಿಲು" ಎಂದು ಕೂಗುವನು. ಅವಳು ಹೋಗಿ ಬಾಗಿಲನ್ನು ತೆರೆಯುವಳು. ಅವರೀರ್ವರೂ ಪ್ರವೇಶಿಸುವರು.)

**ರಾಮಚಂದ್ರ.**—ಎಷ್ಟು ಚೆನ್ನಾಗಿ ಹಾಡು ಹೇಳ್ತಾ ಇದ್ದೆಯೇ, ಲಲಿತ!

**ಲಲಿತಾಂಬ.**—(ಸ್ವಲ್ಪ ನಾಚಿ) ಹೋಗೊ ರಾಮು. ನಿನ್ನ ಯಾರು ಹಾಡು ಕೇಳೊ ಅಂದರು. ಹೋಗೊ.

**ರಾಮಚಂದ್ರ.**—ಕೇಳೂ ಅನ್ನೋದೇನು? ನಾನೇ ಕೇಳಿದೆ. ಬಾಗಿಲ ಹತ್ತಿರ ಬಂದೆ. ನೀನು ಸೊಗಸಾಗಿ ಹಾಡು ಹೇಳ್ತಾ ಇದ್ದೆ. ನಾನು ಕೇಳಿದೆ.

**ಲಲಿತಾಂಬ.**—ಮನೇಲಿ ಯಾರೂ ಇರಲಿಲ್ಲ. ಬೇಜಾರಾಯಿತು. ನಾಟಕದಲ್ಲಿ ಕೇಳಿದ್ದ ಒಂದು ಚರಣ ಜ್ಞಾಪಕ ಬಂತು. ಹೇಳಿಕೋತಾ ಇದ್ದೆ. ಲಕ್ಷ್ಮಮ್ಮಂಗೆ ಈ ಹಾಡು ಬಹಳ ಚೆನ್ನಾಗಿ ಬರುತ್ತೆ. ಅವಳು ಪೂರ್ತಿ ಹೇಳ್ತಾಳೆ.

**ರಾಮಚಂದ್ರ.**—ನಿಂಗೂ ಸೊಗಸಾಗಿ ಬರುತ್ತಲ್ಲೇ ಲಲಿತು. ಸರಿ, ಹೀಗೋ! ಮನೇಲಿ ಯಾರೂ ಇಲ್ಲ. ರಾಣಿಯೋರು ಸಂಗೀತಕ್ಕೆ ಪ್ರಾರಂಭ ಮಾಡಿದ್ದೀರಿ. ಸರಿ, ಸರಿ, ಅರ್ಥವಾಯಿತು.

**ಲಲಿತಾಂಬ.**—(ಹುಸಿ ಮುನಿಸಿನಿಂದ) ಹೌದು, ರಾಜರು ನೀವು ಬಂದು ಕೇಳಲಿ ಅಂತ ಹೇಳ್ತಾ ಇದ್ದೆ. ರಾಣಿಯಂತೆ ರಾಣಿ.

**ರಾಮಚಂದ್ರ.**—(ನಗುತ್ತ) ಹಾಗಾದರೆ, ನೀನು ನನ್ನ ಹೆಂಡತಿಯಾಗಿಬಿಟ್ಟೆಯಲ್ಲೇ ಲಲಿತ. ನಾನು ರಾಣಿ ಅಂದೆ. ನೀನು ರಾಜ ಅಂದೆ.

**ಲಲಿತಾಂಬ.**—(ನಾಚಿಕೆಯಿಂದ ಸ್ವಲ್ಪ ಸುಮ್ಮನೆ ನಿಂತಿದ್ದು) ಥೂ ಹೋಗಪ್ಪ, ನೀನು ರಗಳೆ ಮನುಷ್ಯ. ಸಿಕ್ಕಿದ ಹಾಗೆ ಏನೇನೋ ಹೇಳ್ತೀಯೆ. ನೀನು ಹೀಗೆಲ್ಲಾ ಮಾತಾಡಿದರೆ, ನಾನು ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡುಬಿಡ್ತೀನಿ.

**ರಾಮಚಂದ್ರ.**—(ಸ್ವಗತ) ಇವಳ ಕೈ ಹಿಡಿಯುವ ಭಾಗ್ಯ ನನ ಗಿದೆಯೇ? (ನಿಟ್ಟುಸಿರುಬಿಟ್ಟು ನಿಂತಿದ್ದು ಪ್ರಕಾಶವಾಗಿ) ಇಲ್ಲ. ಇನ್ನು ಹಾಗೆ ಹೇಳೋದಿಲ್ಲ. (ಅವಳ ಸಮೀಪಕ್ಕೆ ಹೋಗಿ) ನೀನು ಒಳ್ಳೆ ಹುಡುಗಿ. (ಜೇಬಿನಿಂದ ಒಂದು ಬೆಳ್ಳಿಯ "ಪಂಚವಾಳ"ವನ್ನು ತೆಗೆದು) ನೋಡಿದೆಯೋ ಇದು ಹೇಗಿದೆ?

**ಲಲಿತಾಂಬ.**—(ಸಂತೋಷದಿಂದ ಅದನ್ನು ಕಿತ್ತುಕೊಂಡು) ಎಷ್ಟು ಚೆನ್ನಾ ಗಿದೆಯೋ, ರಾಮು! ಇದು ಯಾರದು? (ನಿರುತ್ಸಾಹದಿಂದ) ತೊಗೊ. ನನಗೇಕೆ, ಇದು? (ಕೊಡಹೋಗುವಳು.)

**ರಾಮಚಂದ್ರ.**—ಅದು ನಿನಗೇ ತಂದದ್ದು. ಹಿಂದೆ ಪಾಠ ಹೇಳಿದ್ದ ಬಾಕಿ ಹಣ ಇವತ್ತು ಬಂತು. ನೀನು ಪುಟ್ಟ ಕೈಯಲ್ಲಿ ಪೂಜೆಮಾಡು ತ್ತಿದ್ದುದು ಜ್ಞಾಪಕಬಂತು. ನಿನ್ನ ಹಿತ್ತಾಳೆಯ ಪಂಚವಾಳಕ್ಕೆ ಬದಲಾಗಿ ಇದಿರಲಿ ಅಂತ ತಂದೆ.

**ಲಲಿತಾಂಬ.**—(ಸಂತೋಷದಿಂದ) ನೀನು ಎಷ್ಟು ಒಳ್ಳೆಯೋನೋ ರಾಮು! ನನ್ನ ಎಷ್ಟು ಕಷ್ಟದಿಂದ ಎಷ್ಟು ಚೆನ್ನಾಗಿ ನೋಡಿಕೊಂಡೆ. ಈಗ ಇದು ಬೇರೆ ತಂದಿದ್ದೀಯೆ. ಡಾಕ್ಟರಿಗೆ ಉಂಗುರ ಬೇರೆ ಕೊಟ್ಟೆಯಂತೆ. ರಾಮು, ರಾಮು, ಎಷ್ಟು ಒಳ್ಳೆಯೋನೋ ನೀನು! ನಿನ್ನ ನೋಡಿದರೆ ನಂಗೆ ಎಷ್ಟು ಸಂತೋಷವಾಗುತ್ತೋ ದೇವರಿಗೇ ಗೊತ್ತು. ಪಂಚವಾಳ ಬಹಳ ಚೆನ್ನಾಗಿದೆ. ಆದರೆ, ಅಣ್ಣ ಒಪ್ಪಿದರೆ ನಾನು ತೊಗೋತೀನಿ.

**ರಾಮಚಂದ್ರ.**—ಅವರನ್ನ ಒಪ್ಪಿಸೋ ಕೆಲಸ ನನಗಿರಲಿ. ನೀನು ಚೆನ್ನಾಗಿದೆ ಅಂದೆಯಲ್ಲಾ, ಅಷ್ಟೇ ಸಾಕು. ಲಲಿತು, ಈ ಸಲ ನಿನಗೆ ಮದುವೆಯಂತೆ. ನೀನು ಯಾರನ್ನ ಮದುವೆ ಮಾಡಿಕೊಳ್ತೀಯೆ?

**ಲಲಿತು.**—(ನಾಚಿಕೆಯಿಂದ) ಥೂ, ಹೋಗೋ ರಾಮು. ಬೇರೇ ಮಾತೇ ಇಲ್ಲ, ಇವನಿಗೆ. ಮದುವೆಯಂತೆ, ಮದುವೆ. ಮದುವೆ ಮಾತು ಬೇಡ. ಇನ್ನೇನಾದರೂ ಮಾತಾಡೋಣ.

(ಗೌರಮ್ಮನವರು, "ಲಲಿತು, ಲಲಿತು, ಬಾಗಿಲು" ಎಂದು ಕೂಗುವರು. ಲಲಿತಾಂಬ "ಬಂದೆ, ಬಂದೆ" ಎಂದು ಓಡಿಹೋಗುವಳು. ರಾಮಚಂದ್ರ ಪ್ರೀತಿಯನ್ನು ಬೀರುವ ನೋಟದಿಂದ ಅವಳ ಕಡೆಗೆ ನೋಡುವನು. "ಇನ್ನು ಸ್ವಲ್ಪ ತಡವಾಗಿ ಇವರು ಬರಬಾರದಾಗಿತ್ತೆ!" ಎಂದು ಹೇಳಿ ನಿಟ್ಟುಸಿರುಬಿಡುವನು. ತೆರೆಯು ಬೀಳುವುದು.)

---

## ದೃಶ್ಯ ೪

[ರಾಮಾಜೋಯಿಸನ ಹಳ್ಳಿಯ ಬಳಿಯಲ್ಲೊಂದು ಕೊಳದ ದಾರಿ. ರಾಮಾಜೋಯಿಸನೂ, ರಾಮಚಂದ್ರ ಎಂಬವನೂ ಪ್ರವೇಶಿಸುವರು.]

**ರಾಮಾಜೋಯಿಸ.**—ರಾಮು! ಸಂಧ್ಯಾಕಾಲ ಎಷ್ಟು ರಮಣೀಯವಾಗಿದೆ, ನೋಡಿದೆಯಾ? ಗಿಡಮರಗಳೂ, ಪೈರುಪಚ್ಚೆಗಳೂ ಚಿನ್ನದ ರಸದಲ್ಲಿ ಅದ್ದಿದಹಾಗಿವೆ. ಆನಂದವಾಗಿ ಹಾರುತ್ತ ಗೂಡುಗಳಿಗೆ ಹೋಗ್ತಾ ಇರುವ ಪಕ್ಷಿಗಳನ್ನು ನೋಡಿ ನೋಡಿ, ಭಗವಂತನ ಧ್ಯಾನದಲ್ಲಿ ಮನಸ್ಸು ಮಗ್ನವಾಗುತ್ತಿದೆ. ಅದಿರಲಿ......ಒಂದು ಚಿಂತೆಯಯ್ಯ, ನನಗೆ.

**ರಾಮಚಂದ್ರ.**—ಅದೇನು ಜೋಯಿಸರೆ, ಆ ಚಿಂತೆ?

**ರಾಮಾಜೋಯಿಸ.**—ಪಾಪ, ನಿನ್ನನ್ನು ಈ ಕುಗ್ರಾಮಕ್ಕೆ ಕರೆದುಕೊಂಡು ಬಂದು ಅಲೆದಾಡಿಸಿದೆನಲ್ಲಾ ಅಂತ. ಹೇಗೂ ಪರೋಪಕಾರಕ್ಕಾಗಿ ಇಲ್ಲಿಗೆ ಬಂದು ಕೆಲಸಮಾಡಿದೆವು. ಆದರೂ, ನಿನಗೆ ಕಷ್ಟವಾಯಿತಲ್ಲಾ ಅಂತ ಚಿಂತೆ. ಇಲ್ಲಿಯ ತೊಂದರೆಗಳು ನಿನಗೆ ರೂಢಿಯಿಲ್ಲ.

**ರಾಮಚಂದ್ರ.**—ಇಷ್ಟೇತಾನೆ! ನನಗೆ ಕಷ್ಟವಾಗಲಿಲ್ಲ, ಜೋಯಿಸರೆ. ನಾನೂ ಹಿಂದೆ ಇಲ್ಲಿದ್ದವನೇ ತಾನೆ! ಹಳ್ಳಿಯವರೊಡನೆ ಸೇರುವುದೇ ನನಗೊಂದು ಸಂತೋಷ.

**ರಾಮಾಜೋಯಿಸ.**—ಹಾಗಿರಬೇಕಯ್ಯ, ಹಾಗಿರಬೇಕು. ಇದೇ ಬುದ್ಧಿ ಎಲ್ಲರಿಗೂ ಇದ್ದಪಕ್ಷಕ್ಕೆ ನಮ್ಮ ದೇಶ ಈಗಿನಹಾಗಿರುತ್ತಿರಲಿಲ್ಲ. ಅದಿರಲಿ, ನೀನು ಈ ದಿನ ಏಕೋ ಮಂಕಾಗಿದ್ದೀಯೆ. ಮೈಗೆ ಸ್ವಸ್ಥ ವಿಲ್ಲವೆ?

**ರಾಮಚಂದ್ರ.**—ಸ್ವಸ್ಥವಾಗಿಯೇ ಇದ್ದೇನೆ, ಜೋಯಿಸರೆ.

**ರಾಮಾಜೋಯಿಸ.**—ಇಲ್ಲ, ಇಲ್ಲ. ಏನೋ ಒಂದು ಬಗೆಯಾಗಿದ್ದೀಯೆ. ಇಲ್ಲವೇ ನನ್ನ ಕಣ್ಣಿಗೇ ಹಾಗೆ ಕಾಣುತ್ತಿದೆಯೋ, ಏನೋ! ತಂಗಾಳಿಯಲ್ಲಿ ಸುತ್ತಾಡಿದರೆ ಸರಿಹೋದೀತು. ನೀನು ಇಲ್ಲೇ ಸುತ್ತಾಡುತ್ತಿರು. ನಾನು ಕೊಳಕ್ಕೆ ಹೋಗಿ ಪಂಚೆಯನ್ನು ಒಗೆದುಕೊಂಡು ಬಂದುಬಿಡ್ತೀನಿ.

**ರಾಮಚಂದ್ರ.**—ನಾನು ಒಗೆದುಕೊಡಬೇಕೆಂದರೆ ನೀವು ಅವಕಾಶವೇ ಕೊಡುವುದಿಲ್ಲ. ಖಂಡಿತವಾಗಿ ಹೇಳಿಯೇ ಬಿಟ್ಟಿರಿ.

**ರಾಮಾಜೋಯಿಸ.**—ನನ್ನ ಕೈಕಾಲು ಗಟ್ಟಿಯಾಗಿರುವವರೆಗೂ ಅದೆಲ್ಲಾ ಕೂಡದಯ್ಯ. ನಿನಗೆ ಈ ಬಗೆಯ ಬುದ್ಧಿಯಿರುವುದೇ ನನಗೊಂದು ಸಂತೋಷ. ನಾನು ಬೇಗ ಬಂದುಬಿಡುತ್ತೇನೆ. ನೀನು ಕೊಂಚ ಬೇಗ ಬೇಗ ಸುತ್ತಾಡುತ್ತಿರು. ಮೈ ಬೆವರಿದರೆ ಎಲ್ಲಾ ಸರಿಹೋಗುತ್ತೆ.
(ಹೋಗುವನು.)

**ರಾಮಚಂದ್ರ.**—(ನಿಟ್ಟುಸಿರುಬಿಟ್ಟು) ಮೈ ಬೆವರಿದರೆ ಮನೋರೋಗ ಹೋದೀತೆ? ಅಯ್ಯೋ! ಋಷಿಯ ಹಾಗಿದ್ದಾರೆ. ಇವರಿಗೆ ತಿಳಿಸದೆ ಓಡಿಹೋಗಬೇಕಾಯಿತೇ ಎಂಬ ಯೋಚನೆಯಿಂದ ಕಳವಳಪಡುತ್ತಿದ್ದೇನೆ. ಮುಂದೆ ಪರೀಕ್ಷೆಗೆ ಹೋಗುವಹಾಗಿಲ್ಲ. ಸಂಪಾದನೆಗೆ ಮಾರ್ಗವಿಲ್ಲ. ಪಾಪ! ಜೋಯಿಸರಿಗೆ ಭಾರ. ಆದಕಾರಣ, ಈ ದಿನ ರಾತ್ರಿ ಒಬ್ಬರಿಗೂ ಗೋಚರವಿಲ್ಲದೆ ದೂರದ ಸ್ಟೇಷನ್ನಿಗೆ ಓಡಿಹೋಗಿ ರೈಲುಹತ್ತುವುದೇ ಸರಿಯಾದ ದಾರಿ. ಜೋಯಿಸರು ಕೊಟ್ಟಿರುವ ಮುನ್ನೂರು ರೂಪಾಯಿಗಳನ್ನೂ ತೆಗೆದುಕೊಂಡು ಓಡಿಹೋಗುವುದು ವಂಚನೆಯಲ್ಲವೆ? ಕಳವಲ್ಲವೆ? ಆದರೆ, ಆದರೆ...... ಆದರೆ...... (**ಮನೋವ್ಯಥೆಯನ್ನೂ, ಒಳತೋಟಿಯನ್ನೂ ಸೂಚಿಸಿ**)

ಅಯ್ಯೋ! ನನ್ನಂತಹ ಹತಭಾಗ್ಯರನ್ನು ಭಗವಂತನು ಏತಕ್ಕೆ ಸೃಷ್ಟಿಸು ತ್ತಾನೋ ತಿಳಿಯದು. (ಸ್ವಲ್ಪಕಾಲ ಚಿಂತಿಸುತ್ತಿದ್ದು ನಿರ್ಧರದ ಧ್ವನಿಯಿಂದ) ಇಲ್ಲ, ಇಲ್ಲ; ದುರುದ್ದೇಶವಿಲ್ಲದೆ ಈ ಹಣವನ್ನು ತೆಗೆದುಕೊಳ್ಳುವುದು ಅಪರಾಧ ವಾಗುವುದಿಲ್ಲ. ಏನಿದ್ದರೂ ಅದು ಅಕಾರ್ಯವಾಗುತ್ತದೆ. ನನ್ನ ಸದುದ್ದೇ ಶವೇ ನನ್ನನ್ನು ಪಾರುಮಾಡಬೇಕು. ಹೇಗೂ ಜೋಯಿಸರು "ಹಣವನ್ನು ಬ್ಯಾಂಕಿಗೆ ಹಾಕು" ಎಂದಿದ್ದಾರೆ. ಮುಂದೆ ನಾನೇ ಹೆಚ್ಚು ಬಡ್ಡಿಯನ್ನು ಕೊಟ್ಟು ಅವರ ಕ್ಷಮಾಪಣೆಯನ್ನು ಬೇಡಿದರಾಯಿತು. ನನ್ನ ಉದ್ದೇಶವು ಮಾತ್ರ ಈಡೇರಿದರೆ ಎಷ್ಟು ಜನಗಳಿಗೆ ಸಹಾಯಮಾಡಬಹುದು! ಆಗ ಲಾದರೂ ಭಗವಂತನೂ, ಜೋಯಿಸರೂ ನನ್ನ ಅಕಾರ್ಯವನ್ನು ಕ್ಷಮಿಸು ವುದಿಲ್ಲವೆ? ಆದರೆ ನನ್ನ ಉದ್ದೇಶವು ಈಡೇರದೆ ಹೋದರೆ? . . . . ಆ ಯೋಚ ನೆಯೇ ಬೇಡ. ಭಗವಂತನ ಮೇಲೆ ಭಾರವನ್ನು ಹಾಕಿ ಕೆಲಸ ಮಾಡಿದರೆ ಭಯವೆಲ್ಲಿಯದು, ಇರಲಿ ದೇವರಿದ್ದಾನೆ. (ಹೊರಟುಹೋಗುವನು.)

## ಮೂರನೆಯ ಅಂಕ

### ದೃಶ್ಯ ೧

[ರಂಗರಾಯನ ಮನೆಯ ಹಜಾರದ ಒಂದು ಭಾಗ. ಬೆತ್ತದ ಒಂದು ಸೋಫಾ, ಒಂದೆರಡು ಬೆತ್ತದ ಕುರ್ಚಿಗಳು ಇರುವುವು. ಯಶೋದಮ್ಮನು ಅಲಂಕಾರ ಮಾಡಿಕೊಂಡು, ಕೈಗಡಿಯಾರವನ್ನು ತಿರುಗಿಸಿ ತಿರುಗಿಸಿ ನೋಡಿಕೊಳ್ಳುತ್ತ ಪ್ರವೇಶಿಸುವಳು.]

**ಯಶೋದಮ್ಮ.**—ಲತೀಫ್, ಲತೀಫ್.

**ಅಬ್ದುಲ್ ಲತೀಫ್.**—(ಪ್ರವೇಶಿಸಿ) ಅಮ್ಮಾ, ಅಮ್ಮಾ.

**ಯಶೋದಮ್ಮ.**—ಪೋಸ್ಟಾಫೀಸಿನಿಂದ ಟೆಲಿಗ್ರಾಫ್ ಜವಾನ ಬಂದಿದ್ದನೇನೊ?

**ಅಬ್ದುಲ್ ಲತೀಫ್.**—ಇಲ್ಲಾ, ಅಮ್ಮಾ.

**ಯಶೋದಮ್ಮ.**—ಕಾಗದಾನೂ ಬರಲಿಲ್ಲವೆ?

**ಅಬ್ದುಲ್ ಲತೀಫ್.**—ಈಗೆಲ್ಲಿ ಕಾಗಜ ಬರ್ತಾದೆ? ಬೆಳಗ್ಗೇನೆ ಹೇಳಿದ್ನೇ, ಒಂದು ಕಾಗಜಾನೂ ಇಲ್ಲ ಅಂತ.

**ಯಶೋದಮ್ಮ.**—ಹೋಗಲಿ, ನೀನು ಸ್ಟೇಷನ್ನಿಗೆ ಹೋಗಿಬಿಡು. ಯಜಮಾನರು ಬಂದೇ ಬರ್ತಾರೆ, ಈಗಿನ ರೈಲಿಗೆ.

**ಅಬ್ದುಲ್ ಲತೀಫ್.**—ರೈಲು ಇಷ್ಟು ಬೇಗ ಬಂದುಬಿಡ್ತಾಳೆ? ಅವಳು ಇನ್ನೂ ಹೊತ್ತಾಗಿ ಬರ್ತಾಳೆ.

**ಯಶೋದಮ್ಮ.**—(ನಕ್ಕು) ನೀನೊಂದು ಗೂಸ್. ರೈಲು ಬರ್ತಾಳೆ ಅಂದರೇನೊ. ಅವಲಕ್ಷಣದ ಮಾತು.

**ಅಬ್ದುಲ್ ಲತೀಫ್.**—ಸುಮ್ಮಸುಮ್ಕೆ ನನಗೊಂದು ಘೂಸಾ ಅಂತೀರಿ. ರೈಲು ಬರ್ತಾಳೆ, ಕುದುರೆ ಹೋಗ್ತಾನೆ, ಅನ್ನೋದು ನಮ್ಮ ಮಾತಿನ ಷಾಸ್ತ್ರದ ಪ್ರಕಾರ ಅಚ್ಛೇ ಮಾತು ಐತೆ.

**ಯಶೋದಮ್ಮ.**—ಹೋಗಲಿ. ರೈಲು ಸ್ಟೇಷನ್ನಿಗೆ ಹೋಗು. ಮುಂಚೆ ಆಗಿದ್ದರೂ ಚಿಂತೆಯಿಲ್ಲ, ಹೋಗು.

**ಅಬ್ದುಲ್ ಲತೀಫ್.**—(ಸ್ವಗತ) ಇದ್ಯಾಕೆ ಈ ಅಮ್ಮ ಹಿಂಗೆ ಹೇಳ್ತಾಳೆ? ನಂಗೇನು? ಈಗಲೇ ಹೋಯ್ತಾದೆ. ಇಲ್ಲಿರೋದು ಅಲ್ಲೇ ಇತರ್ಾದೆ. ಆರಾಮಾಗಿ ಬೀಡಿ ಕುಡೀತಾದೆ. (ಪ್ರಕಾಶ) ಹೋಗ್ತೀನಿ, ಅಮ್ಮಾ. (ಹೋಗುವನು.)

**ಯಶೋದಮ್ಮ.**—ಇವರು ಯಾಕೆ ಟೆಲಿಗ್ರಾಫ್ ಕೊಡ್ಲಿಲ್ಲ? ಮೊನ್ನೆಯೇ result ತಿಳಿದುಹೋಗಿರಬೇಕಲ್ಲ. ಬರಲೂ ಇಲ್ಲ. ಲೆಟರೂ ಬರೆಯಲಿಲ್ಲ. ಟೆಲಿಗ್ರಾಫೂ ಕೊಡಲಿಲ್ಲ. ಎಲ್ಲಾ ಹೀಗೇ, ಇವರು dirty ಕೆಲಸವೇ ಮಾಡೋದು? ಆಫೀಸರಾಗಿದ್ದರೆ, ಎಷ್ಟು ಠೀಕ್ ಠಾಕಾಗಿ ಮಾಡಬಹುದಾಗಿತ್ತು. ಆ punctuality ಈಗ ಬಾ ಅಂದರೆ ಬಂದೀತೆ? ಆದರೂ, ಪಾಪ, ನಾನು ಹೇಳಿದ ಹಾಗೆ ಕೇಳಿಕೊಂಡಿದಾರೆ. ಅವರನ್ನು ಬೈದುತಾನೇ ಏನು ಫಲ? ಅಕ್ಕಿ ಹಿಟ್ಟಿನಲ್ಲಿ ಸೇವಿಗೆ ಬರಲಿಲ್ಲಾ ಅಂತ ಹಾರಾಡಿ ಫಲವೇನು? ಈ ಸಾರಿ ವೋಟು ಸಿಕ್ಕಿ, ಇವರು ದೊಡ್ಡದೊಡ್ಡೋರ ಜೊತೇಲಿ ಓಡಾಡೋ ಹಾಗಾದರೆ ಅಷ್ಟೇ ಸಾಕು. ಆಗಬಹುದು, ಆಗ ಬಹುದು. ವೋಟು ಬರಬಹುದು. ನಾನೂ ವಿಜಿಟರ್ಸ್ ಗ್ಯಾಲರಿಗೆ ಹೋಗಿ ಕೂತುಕೊಂಡು ಕೇಳಬೇಕು. "ಮಹಾಸ್ವಾಮಿ, ಮೈಸೂರು ಸೀಮೆಯ ಗಂಡಸರಲ್ಲಿ ಮುಕ್ಕಾಲು ಪಾಲು ಮೇಲಿನ ಜನರು ಮೃಗಗಳು. ಕಾಡು ಜಂತುಗಳು. ಹೆಂಗಸರಿಗೆ rights ಕೊಡದೆ ಪಾತಾಳಕ್ಕೆ, ಅದರ ಕೆಳಗೆ ಇನ್ನೊಂದು ಲೋಕವಿದ್ದರೆ ಆ ಹೆಸರಿಲ್ಲದ ಹಾಳು ಲೋಕಕ್ಕೆ, ತುಳಿದು ತಮ್ಮ ಸಮಾನವಿಲ್ಲಾ ಅಂತಿದ್ದಾರೆ. ಗಂಡಸರಲ್ಲಿ ಅಂಥೋರಿಗೆಲ್ಲಾ ಬಿಸಿ ಯಾಗಿ ಬರೆಮುಟ್ಟಿಸಿ ಬುದ್ಧಿ ಕಲಿಸಬೇಕು. ಹೆಂಗಸರಿಗೂ ಗಂಡಸರಂತೆ ಸಮಾನವಾದ ಹಕ್ಕುಗಳು ಇರೋಹಾಗೆ ರೂಲ್ಸ್ ಮಾಡಿಬಿಡಬೇಕು." ಅಂತ ಇವರು ಹೇಳಿದ್ದನ್ನ ಕೇಳಬೇಕು. ಇವರಿಗೆ ಕಷ್ಟಪಟ್ಟು duty ಮಾಡಿದ್ದಕ್ಕೆ ಬೆನ್ನುತಟ್ಟಿ ಇವರ healthಗೆ ಕಾಫಿ ಕುಡಿದುಬಿಡಬೇಕು. ಸರಿಯೆ, ಟೆಲಿಗ್ರಾಫೂ ಇಲ್ಲ. ಕಾಗದವೂ ಇಲ್ಲ. ವೋಟು ಸಿಕ್ಕದೆ ಹೋಗಿರ ಬಹುದೆ? ಇವರು ಜೀಳು ಮೋರೆ ಹಾಕಿಕೊಂಡು "ಇನ್ನು ಎಂದೆಂದಿಗೂ" ಈ ಪ್ರಯತ್ನ ಬೇಡ ಅಂತ ಎಲ್ಲಿ ಬಂದುಬಿಡ್ತಾರೋ? ಹಾಗೆ ಬಂದರೆ, "Try, try again. ಈಗ ಮೆಂಬರಾಗಿರೋರೇನು ತಲೆ ಮೇಲೆ ಮೊಳೆ

ಬಡಿಸಿಕೊಂಡಿರ್ತಾರೇನು? ಇವರೇ ಶಾಶ್ವತವಾಗಿರ್ತಾರೇನು? ಆಡಿದ ಹಾಗೆ ಮೂರು ವರುಷ ಓಡಿಬರುತ್ತೆ. ತಿರುಗಿ ನಿಲ್ಲೋದೆ. ಜಯಭೇರಿ ಹೊಡೆಯೋದೆ. No dear, ನೀವು ಮೆಂಬರಾದ ಹೊರತು ನಾನು excuse ಮಾಡೋಲ್ಲ.'' ಎನ್ನಬೇಕು. (ಆಲಿಸಿ ಕೇಳಿ) ಏನು ಸದ್ದು? ಕೆಮ್ಮಿದ ಹಾಗಾಯಿತು. ಓ, ಬಂದರು, ಬಂದರು. ಏನಾಯಿತು ಅಂದರೆ? ಹಣ್ಣೋ ಕಾಯೊ?

**ರಂಗರಾಯ.**—(ಪ್ರವೇಶಿಸಿ) ಏನೋ ಒಂದು. ಅಯ್ಯೋ, ಇಂಥಾ ವರೂ ಇರ್ತಾರೆ, ಹೀಗೂ ಆಗುತ್ತೆ, ಅಂತ ನಾನು ಸ್ವಪ್ನದಲ್ಲೂ ತಿಳಿದಿರಲಿಲ್ಲ. ನಮ್ಮ ಕೆಲಸ ಶುದ್ಧ ತಪ್ಪು. ನಾನು ನಿನ್ನ ಮಾತು ಕೇಳಬಾರದಾಗಿತ್ತು.

**ಯಶೋದಮ್ಮ.**—ಇಷ್ಟೇತಾನೆ? ಕೊನೆಗೂ ಇದೇನೇ? ಮನೆ ಹಾಳರು. ನಿಮಗೆ ಸೊನ್ನೆಸುತ್ತಿದರೋ? ಹೆದರಬೇಡಿ. Don't be sorry, dear, ಇನ್ನೊಂದುಸಲ ಆಗೇ ಆಗುತ್ತೆ. ಅವರು ಉದ್ಧಾರವಾಗೋದು ಅಷ್ಟರಲ್ಲೇ ಇದೆ. ಮೊದಲು ಸಭೆಗೆ ಓಡಿಹೋಗಿ ಅವರು ಮಾಡಿ ಮರಟು ಹಾಕ್ತೋದೇನು? ನೀವು ಸಭೆ ಹೊರಗಿದ್ದೇ ಎಷ್ಟೋ ಕೆಲಸ ಮಾಡಬಹುದು. ಆಮೇಲೆ ಸಭೆಗೆ ಹೋದರೆ ಮತ್ತೂ ಸೊಗಸು.

**ರಂಗರಾಯ.**—ಸಭೆಗೆ ಈಗಲೇ ಹೋದಹಾಗೇ ಆಯಿತು. ಮೆಂಬರಾಗೇ ಆದೆ. ಅದಲ್ಲ ನಾನು ಹೇಳಿದ್ದು.

**ಯಶೋದಮ್ಮ.**—(ಆತುರದಿಂದ ಮುಂದೆ ಹೋಗಿ ಅವನ ಭುಜದ ಮೇಲೆ ಕೈಯ್ಯನ್ನು ಹಾಕಿ) ಆದಿರಾ, ಆದಿರಾ, ಮೆಂಬರಾಗೇಬಿಟ್ಟಿರಾ? ನನ್ನ ಸತಾಯಿಸಿ ಸುಳ್ಳು ಹೇಳಬೇಡಿರೀ. ನೀವು ಮೆಂಬರು ಆಗಿರೋದು ಮಾತ್ರ ನಿಜವಾಗಿದ್ದರೆ, ಇನ್ನುಮೇಲೆ ನಿಮ್ಮ ದೊಡ್ಡತನಕ್ಕೆ ಸರಿಯಾಗಿ ಕಾಣ್ತೇನೆ. ನಿಮ್ಮನ್ನ ಹೇಗೆ ಆದರಿಸ್ತೇನೋ ನೋಡಿ. ನೀವು ಆಫೀಸರಾಗಲಿಲ್ಲ ಅನ್ನೋ ಆಕ್ಷೇಪಣೇನೇ ಬಿಟ್ಟುಬಿಡ್ತೇನೆ. ಸುಮ್ಮನೆ ಮನೇಲಿ ಕೂತಿರೋದು ತಪ್ಪಿ ದೊಡ್ಡ ದೊಡ್ಡೋರ ಸಂಗಡ ಹೋಗಿ ಸೇರೋ ಹಾಗಾಯ್ತು ಅಂತ ಸಂತೋಷಪಡ್ತೇನೆ. ಹಿಂದೆ ಎಂದೂ ನೀವು ಸ್ವಪ್ನದಲ್ಲೂ ಕಂಡಿಲ್ಲ ದಷ್ಟು ಸುಖಪಡಿಸಿ ನಾನೂ ಸಂತೋಷಪಡ್ತೇನೆ.

**ರಂಗರಾಯ.**—ಯಶೋದ! ನಿನ್ನ ಮನಸ್ಸು ನನಗೆ ಇವತ್ತು ಗೊತ್ತಾಯ್ತು, you silly goose.

**ಯಶೋದಮ್ಮ.**—ಆ ಮಾತು ನಾನು ನಿಮಗೆ ಹೇಳಬೇಕಾದ್ದೇ. ನಾನು ಹೇಳಬೇಕಾದ್ದು.

**ರಂಗರಾಯ.**—ಒಳ್ಳೆಯದಕ್ಕೂ, ಕೆಟ್ಟದ್ದಕ್ಕೂ, ಎಲ್ಲಾದಕ್ಕೂ, ಬೈಗಳ ಕೇಳೋದೇ ನನ್ನ ಹಣೆಯ ಬರೆಹವೆ?

**ಯಶೋದಮ್ಮ.**—ಅಲ್ಲಾ ಅಂದರೆ, ನನ್ನಷ್ಟು ಪ್ರೀತಿಯಾಗಿ ನಿಮ್ಮನ್ನ ಬಯ್ಯೋರು ಯಾರಿದ್ದಾರೆ? ಅಥವ ಅದು ಯಾರಿಗೆ ತಾನೆ ಸಾಧ್ಯ? ಈ ಅಡ್ಡಮಾತು ಬೇಡ. (ಉತ್ಸಾಹದಿಂದ ಕೂಡಿದ ಆತುರದಿಂದ) ನೀವು ನಿಜವಾಗಿಯೂ ಮೆಂಬರಾದಿರಾ? ನಿಜವಾಗಿ, ನಿಜವಾಗಿ, ನನ್ನಾಣೆಗೂ, ನಿಮ್ಮಾಣೆಗೂ.

**ರಂಗರಾಯ.**—ಆಣೆಯಂತೆ ಆಣೆ. ಕಟ್ಟುಬಣ್ಣ ಎಷ್ಟಿದ್ದರೂ, ಈ ಹೆಂಗಸರ ಹುಟ್ಟುಗುಣ ಹೋಗೋದೇ ಇಲ್ಲವಲ್ಲ. ಖಂಡಿತವಾಗಿಯೂ ನಾನು ಮೆಂಬರು. ಆದರೆ..........

**ಯಶೋದಮ್ಮ.**—(ಧೊಪ್ಪನೆ ಚಿತ್ರದ ಕುರ್ಚಿಯ ಮೇಲೆ ಕುಳಿತುಕೊಂಡು) ಇನ್ನು ನನಗೆ ನಿಶ್ಚಿಂತೆ. ನಿಮ್ಮ "ಆದರೆ ಗೀದರೆ" ನನಗೆ ಬೇಡ, ನೀವು ಮೆಂಬರು, ಮೆಂಬರು, ನನಗೆ ಅಷ್ಟು ಸಾಕು.

**ರಂಗರಾಯ.**—ಎಷ್ಟು excite ಆಗಿಹೋಗಿದ್ದೀಯೆ, ಯಶೋದ? ಇದೇನು ಸಂತೋಷ, ಏನು ಕಥೆ! ಮುಖವೆಲ್ಲಾ ಹುಚ್ಚು ಹುಚ್ಚಾಗಿ ಹೋಗಿದೆಯಲ್ಲೆ.

**ಯಶೋದಮ್ಮ.**—ನೀವು ನನ್ನ ಹಾಗೇ ಹೆಂಗಸಾಗಿ ಹುಟ್ಟಿದ್ದು, ಯಾರಿಗಾದರೂ ಹೆಂಡತಿಯಾಗಿದ್ದು, ಎಷ್ಟೋ ವರುಷ, "ಬ್ಲ್ಯಾಕ್ ಹೋಲ್" ವಿಾರಿಸೋ ಅಂತ ಕತ್ತಲೆ ಕೋಣೇಲಿದ್ದು ಇವತ್ತಿನ ಹಾಗೆ ಬೆಳಕಿನ ಸೊಗಸು ಕಂಡಿದ್ದರೆ ಆಗ ನಿಮಗೆ ಗೊತ್ತಾಗ್ತಾ ಇತ್ತು. ನಿಮ್ಮ ದೇಹ, ನಿಮ್ಮ ಮನಸ್ಸು, ನಿಮ್ಮ ಜೀವ ಹೇಗೆ ಕುಣಿದು, ಹೇಗೆ ಉಬ್ಬಿ ಹೋಗೋದು ಅನ್ನೋದು ಆಗ ನಿಮಗೆ ಅನುಭವಕ್ಕೆ ಬರೋದು.

**ರಂಗರಾಯ.**—ಅದೆಲ್ಲಾ ಸರಿ. ಮೆಂಬರಾದ್ದಕ್ಕೆ ತಕ್ಕಹಾಗೆ ಸೈ ಅನ್ನಿಸಿಕೊಂಡು ಕೆಲಸ ಮಾಡಬೇಕಲ್ಲ. ರಾಮಚಂದ್ರನ್ ಮತ್ತು ರಾಮಾ ಜೋಯಿಸರು, ಇವರಿಬ್ಬರಿಗೂ ನಾವು ಅನ್ಯಾಯಮಾಡಿದ್ದೆವು. ಇಬ್ಬರೂ ಅದನ್ನು ಗಮನಿಸದೆ ನನಗೆ ಸಹಾಯಮಾಡಿದರು. ರಾಮಚಂದ್ರನ್ ಮಾಡಿದ್ದು ತಪ್ಪು. ಆದರೂ ನಾವು excuse ಮಾಡಬೇಕಾಗಿತ್ತು. ನಾವು ಮನೆ ಬಿಡಿಸಿ ಓಡಿಸಿದ್ದರೂ ಅವನು ಹಳ್ಳಿ ಹಳ್ಳಿಗೂ ತಿರುಗಿ ನನಗೆ ಸಹಾಯ ಮಾಡಿದ. ರಾಮಾಜೋಯಿಸರು ತಮ್ಮ ಜಮೀನು ಇರೋ ಹಳ್ಳಿಗಳವರ ವೋಟುಗಳನ್ನೆಲ್ಲಾ ನನಗೇ ಕೊಡಿಸಿದರು. ನನಗೂ ನನ್ನ ಹಿಂದೆ ಬಿದ್ದೋ ರಿಗೂ ಇಪ್ಪತ್ತು ವೋಟುಗಳು ಮಾತ್ರ ವ್ಯತ್ಯಾಸ. ಅವರು ವೋಟು ಕೊಡಿಸದೆಹೋಗಿದ್ದರೆ, ಖಂಡಿತ ನಾನು ಸೋಲ್ತಾ ಇದ್ದೆ.

**ಯಶೋದಮ್ಮ.**—ನಾನೂ ಹ್ಯಾಗೂ ladiesಗೆ ಟೀ ಪಾರ್ಟಿ ಮಾಡಿಸ್ತೇನಲ್ಲ. ಅವತ್ತು ರಾಮಾಜೋಯಿಸರ ಹೆಂಡತಿ ಗೌರಮ್ಮನೋ ರನ್ನೂ ಕರೆಯೋಣ.

**ರಂಗರಾಯ.**—ನನ್ನ ಜೊತೇಲಿ ಬಾ ಅಂದರೆ ಕಿಟ್ಟು ಕೂಡ, ಮೂರು ನಾಲ್ಕು ದಿನ ಬರೋಕೆ ಓದು ಹೋಗುತ್ತೆ ಅಂದ. ನಾವು ಅಪಕಾರ ಮಾಡಿದ್ರೂ ರಾಮಚಂದ್ರನ್ ನಮಗೆ ಹೀಗೆ ಉಪಕಾರಮಾಡಿದ. ಅವನ patriotism ಹ್ಯಾಗಿದೇ ಅಂತೀಯೆ ? ಅವನ ಪಾಡಿಗೆ ಅವನು ಓದಿಕೊಂಡು ಇರ್ತಾ ಇದ್ದ. ಅದೂ ತಪ್ಪಿಸಿ, "ಚಿಕ್ಕಪ್ಪ ತಾನೂ ಇಕ್ಕ, ಭಿಕ್ಷನೂ ಬೇಡಲೀಸ" ಅಂದ ಹಾಗೆ ಮಾಡಿದೆವು. ಅವನ career ಹಾಳುಮಾಡಿ ದೆವು. "ಏನಪ್ಪಾ! ನಾನು excuse ಕೇಳಿಕೋತೇನೆ. ಅಬ್ಬ! ನೀನು ಇಷ್ಟು noble ಆಗಿ revenge ತೊಗೊಂಡದ್ದು ನೋಡಿ ನನ್ನ ಮನಸ್ಸೇ ನೊಂದುಹೋಯಿತು" ಅಂತ ನಾನು ಹೇಳಿದೆ. ಅದಕ್ಕೆ ಅವನು ನಗುತ್ತ ನಗುತ್ತಾ "ಏನೂ ಇಲ್ಲ, ಸಾರ್. ನೀವೂ ನನ್ನ ಕಳುಹಿಸಿಬಿಟ್ಟಿರಿ. Private tuition ಮನೆಯೋರು ಬೇರೆ ಜನರನ್ನು ಗೊತ್ತುಮಾಡಿಕೊಂಡು ಮೊದಲೇ ನನ್ನ ಕೈಬಿಟ್ಟಿದ್ದರು. ನಾನು ಬರೋಲ್ಲ ಅಂತ ಹೇಳಿದ್ದರಿಂದ ಅವರು ಹಾಗೆ ಮಾಡಿದರು. ನನಗೆ ದಿಕ್ಕೇ ತೋರದೆ ದಿಗ್ಭ್ರಮೆ ಹಿಡೀತು.

ಆಮೇಲೆ ರಾಮಾಜೋಯಿಸರು ಆಶ್ರಯ ಕೊಟ್ಟರು. ಅವರ ಮನೆಯವ ರೆಲ್ಲರಿಗೂ ಕಾಯಿಲೆಯಾಯಿತು. ನಾನು ಬುಕ್ಕು ಬಿಸಾಡಿ ಸೌಟು ಹಿಡಿದೆ. ಕೆಲಸಕ್ಕಾದರೂ ಸೇರೋಣವೆಂತ ಎಷ್ಟೋ ಹುಡುಕಿದೆ. ಕೆಲಸವೂ ಸಿಕ್ಕಲಿಲ್ಲ. ಆಮೇಲೆ ಹಾಗೇ ಯೋಚಿಸಿದೆ. ಹೇಗೂ ಪರೀಕ್ಷೆ ಪ್ಯಾಸಾಗೋಲ್ಲ. ಇನ್ನೊಬ್ಬರಿಗೆ ಭಾರವಾದ ಹಾಳು ಜೀವನ. ನಮ್ಮ ಊರಿನೋರು ಮುಂಬರಾಗೋದಕ್ಕಾದರೂ ಸಹಾಯಮಾಡೋಣ ಅಂತ ತೋರಿತು. ಜೋಯಿಸರೂ ಅದಕ್ಕೆ ಸೋಬಾನೆ ಅಂದರು. ಸದ್ಯ, ಹಿಡಿದ ಕೆಲಸ ಪೂರೈಸಿ ಸಾರ್ಥಕವಾಯಿತು. ಇನ್ನು ನಾನು ಎಲ್ಲಿ ಹಾಳಾಗಿಹೋದರೂ ಕೇಳೋರೇ ಇಲ್ಲ. ನಮ್ಮಂಥವರಿಂದ ಇತರರಿಗೆ ಭಾರ; ಸ್ವಂತಕ್ಕೆ ಸುಖವಿಲ್ಲ.'' ಅಂದ ನೋಡು. ನನ್ನ ಕಣ್ಣಿನಲ್ಲಿ ನೀರು ಬರೋಹಾಗಾಯಿತು.

**ಯಶೋದಮ್ಮ.**—ನೀವು ಸಾವಿರ ಮಾತು ಹೇಳಿ. ಅವನು ಮಾಡಿದ್ದು ದೊಡ್ಡ ತಪ್ಪು.

**ರಂಗರಾಯ.**—ಯಶೋದ, ನಿನ್ನ ಮನಸ್ಸು ಬಹಳ ಕಠಿಣ.

**ಯಶೋದಮ್ಮ.**—ನೀವು ಮೃದು ಮನಸ್ಸಿನೋರು. ನಿಮ್ಮ ಕಿರೀಟ ನಿಮ್ಮಲ್ಲೇ ಇರಲಿ.

**ರಂಗರಾಯ.**—ವೋಟು ಕೊಡೋದು ಹ್ಯಾಗೆ ಅನ್ನೋದನ್ನ ಅವನು ಜನರಿಗೆ ಹೇಳಿದ ಸೊಗಸಾದರೂ ನೋಡು. ನನ್ನ ಚಿಹ್ನೆ ಹಸು. ಇತರರಲ್ಲಿ ಒಬ್ಬರದು ಮರ, ಒಬ್ಬರದು ಬೈಸಿಕಲ್ಲು, ಒಬ್ಬರದು ಹಕ್ಕಿ, ಒಬ್ಬರದು ಸಿಂಹ, ಅವನು ಹೇಳಿದ ಸೊಗಸು ನೋಡು :—''ವೋಟು ಕೊಡೋದು ಸುಲಭವಯ್ಯ. ಒಂದೊಂದು ಗೀಟು ಎಳೆದು ಮರ ಕಡಿದು ಬಿಡಿ. ಹಕ್ಕಿ ಹಾರಿಸಿಬಿಡಿ. ಬೈಸಿಕಲ್ಲು ಹಳ್ಳಿಯೋರಿಗೇಕೆ? ಅದನ್ನು ಮುರಿದುಬಿಡಿ. ಇವು ಮೂರರ ಮೇಲೂ ಗೆರೆ ಎಳೆದುಬಿಡಿ. ಹಸು ರೈತರ ಆಧಾರಿ. ಗೋಮಾತೆ. ಅದರ ಮೇಲೆ ಗೀಟು ಎಳೆಯಬೇಡಿ. ಹಾಗೇ ಬಿಟ್ಟುಬಿಡಿ. ಸಿಂಹ ಮಾರಮ್ಮನ ವಾಹನ. ಅದರ ತಂಟೆಗೇ ಹೋಗಬೇಡಿ. ಮಾರಮ್ಮನಿಗೆ ಕೋಪ ಬಂದೀತು. ಅದರಮೇಲೂ ಗೀಟು

ಎಳೆಯಬೇಡಿ.'' ಹೀಗೆ ಅವನು ಉಪದೇಶ ಮಾಡಿಬಿಟ್ಟ. ವೋಟರುಗಳಿಗೆಲ್ಲಾ ಮಂಕುಬೂದಿ ಎರಚಿ ಮಂತ್ರಹಾಕಿದ ಹಾಗಾಯಿತು. ನನಗೂ, ನನ್ನ friend ಸೆಟ್ಟರಿಗೂ, ಜಯವಾಯಿತು. ಅವರದೇ ಸಿಂಹದ ಚಿಹ್ನೆ. ಅವರಂತೂ, ಅವನ ಬುದ್ಧಿವಂತಿಕೆ ನೋಡಿ, ಆನಂದಪಟ್ಟು ಅವನನ್ನ ಬಾಚಿ ತಬ್ಬಿಕೊಂಡುಬಿಟ್ಟರು. ಹಳ್ಳಿಯವರ ಜೊತೆಗೆ ಹಳ್ಳಿಯವನಾಗಿ ಅವರಿಗೆ ತಿಳಿಯುವ ಹಾಗೆ ಅವನು ಆಡಿದ ಆ ಮಾತುಗಳ ಮುಂದೆ ಇತರರ ಆಟ ಯಾವುದೂ ನಡೆಯಲಿಲ್ಲ. ಯಾರ್ಯಾರು ಎಷ್ಟೆಷ್ಟು ಬಣ್ಣದ ಚೀಟಿಗಳು ಕೊಟ್ಟದ್ದೂ ಪ್ರಯೋಜನವಿಲ್ಲದೆ ನಮ್ಮಿಬ್ಬರಿಗೇ ಜಯವಾಯಿತು.

**ಯಶೋದಮ್ಮ.**—(ನಗುತ್ತ) ಜಯವಾಗಿದ್ದೂ ಹೀಗೇಕೆ ಕೆಟ್ಟ ಮುಖ ಹಾಕಿಕೊಂಡಿದ್ದೀರಿ?

**ರಂಗರಾಯ.**—ನಮ್ಮಿಂದ ರಾಮಾಜೋಯಿಸರಿಗೆ ನಷ್ಟ ತಟ್ಟಿತು. ರಾಮಚಂದ್ರನ್ career ಹಾಳಾಯ್ತು.

**ಯಶೋದಮ್ಮ.**—(ಧೋರಣೆಯ ಸ್ವರದಿಂದ) ಗಂಡಸರಷ್ಟು fickle mind ಯಾರಿಗೂ ಇಲ್ಲ, ನೋಡಿ. ಏನೋ ಸ್ವಲ್ಪ ಸಹಾಯ ಮಾಡಿದ ಅಂತ ಅವನು ಮಾಡಿದ ತಪ್ಪು ತೇಲಿಸಿಯೇ ಬಿಡೋದೆ? ಇದೇನೇನೋ ಲೋಕಾರೀತಿ ಸಂಸಾರವಂದಿಗರ ಲಕ್ಷಣ?

**ರಂಗರಾಯ.**—ನಿನ್ನ ಅಭಿಪ್ರಾಯದಲ್ಲಿ ಮಿಲಿಟರಿ ಸಿಸ್ಟಿನಹಾಗೆ ಹೆಂಡತಿ ಹೇಳಿದ್ದು ಮಹಾ ಪ್ರಸಾದ ಅಂತ ಗಂಡ ಕೇಳಿ ಕುಣಿದರೆ, ಅದೇ ಲೋಕಾರೀತಿ ಸಂಸಾರವಂದಿಗರ ಲಕ್ಷಣ. ಅಲ್ಲವೆ? ಪೂರ್ತಿಯಾಗಿ ಕೇಳು. ಮೊನ್ನೆಯೇ ಎಲೆಕ್ಷನ್ ಮುಗೀತು. ಬೆಳಗಾಗುವ ಹೊತ್ತಿಗೆ ರಾಮಚಂದ್ರನ್ ಪರಾರಿ. ರಾಮಾಜೋಯಿಸರಿಗೆ ಒಬ್ಬ ರೈತನಿಂದ ಅವರ ಸಾಲದ ಹಣ ಮುನ್ನೂರು ರೂಪಾಯಿ ಬಂದಿತ್ತು. ಅದೂ ಅವನ ಹತ್ತಿರವೇ ಇತ್ತು. ಅವನು ಪತ್ತೆಯೇ ಇಲ್ಲ. ನಿನ್ನೆಯೆಲ್ಲಾ ಹುಡುಕಿಸಿದ್ದಾಯಿತು. ಅವನು ಸಿಕ್ಕಲಿಲ್ಲ. ಆ ಅವಾಂತರದಲ್ಲಿ ನಾನು ಹೊರಡೋಕೆ ಮನಸ್ಸೇ ಬರಲಿಲ್ಲ. ಅವನು ಹಿಂದಿನ ದಿನ ಆಡಿದ್ದ ಮಾತಿಗೆ ಆಗ ಅರ್ಥವಾಯಿತು. (**ಶಾಮಾಶಾಸ್ತ್ರಿಯು ''ರಂಗರಾವ್, ರಂಗರಾವ್'' ಎಂದು ಕೂಗಿಕೊಂಡು**

ಪ್ರವೇಶಿಸುವನು. ಅವನ ಹಿಂದೆ ಗೋಪಾಲರಾಯನು ಬರುವನು. ಯಶೋದಮ್ಮನು ಹೊರಟು ಹೋಗುವಳು.)

**ಶಾಮಾಶಾಸ್ತ್ರಿ.**—ಏನಯ್ಯ, ಗೋಳಾಡ್ತಾ ಇದ್ದೆ. ಕೊನೆಗೂ ಹೊಡೆದೇಬಿಟ್ಟೆ ಜಯಭೇರಿ.

**ಗೋಪಾಲರಾಯ.**—Many many congratulations, I say. ಭೇಷ್! ಕೊನೆಗೂ ಹೊಡೆದೇಬಿಟ್ಟೆ.

**ರಂಗರಾಯ.**—ಏನೋ ನಿಮ್ಮೆಲ್ಲರ ದಯ. Many thanks.

(ತೆರೆಯು ಬೀಳುವುದು.)

---

## ದೃಶ್ಯ ೨

[ರಂಗರಾಯನ ಮನೆ. ಟೀ ಪಾರ್ಟಿಗಾಗಿ ಸುಸಜ್ಜಿತವಾಗಿ ಸಿದ್ಧವಾಗಿರುವ ಅಂತ ಗೃಹ. ಮೇಜುಗಳ ಮೇಲೆ ದುಪ್ಪಟಿ ಹಾಸಿ ಸಿದ್ಧವಾಗಿದೆ. ಸಾಲು ಸಾಲಾಗಿ ಕುರ್ಚಿಗಳು; ಪಿಂಗಾಣಿಯ ತಟ್ಟೆ ಬಟ್ಟಲುಗಳು; ಇವೇ ಮುಂತಾದ ಸಮಸ್ತ ಸಂಭಾರಗಳೂ ಸಿದ್ಧವಾಗಿವೆ.]

**ಯಶೋದಮ್ಮ.**—(ಪ್ರವೇಶಿಸಿ, ಇತರ ಹೆಂಗಸರನ್ನೂ ಆದರದಿಂದ ಬರ ಮಾಡಿಕೊಳ್ಳುವಳು) ರಂಗಮ್ಮನೋರೆ, ನೀವುಗಳೆಲ್ಲರೂ ಬಂದದ್ದು ಬಹಳ ಸಂತೋಷ. ಎಲ್ಲರೂ oblige ಮಾಡಿದಿರಿ. ಮ್ಯಾಜಿಸ್ಟ್ರೇಟರ ಕುಟುಂಬ ಕಾವೇರಮ್ಮನವರು ಬಂದದ್ದಂತೂ ಬಹಳ ಸಂತೋಷ.

**ರಂಗಮ್ಮ.**—ಕರೆದರೆ ಬರದೇ ಏನಮ್ಮ? ನಿಮ್ಮ ಮನೇಲಿರುವ ಕಸೂತಿ ಪಠ, ಚಮುಕಿ ಪಠ ಮುಂತಾದ್ದನ್ನೆಲ್ಲಾ ಕಣ್ಣುತುಂಬ ನೋಡಿ ದ್ದಾಯಿತಮ್ಮ. ಎಲ್ಲ artistic ಆಗಿದೆ. ತನ್ಮಯ ನೋಡಿ. ಎಲ್ಲಾ heredity ಕಾಣ್ರೀ; ವಂಶ ಅನುಸರಿಸಿಕೊಂಡು ಹೋಗುತ್ತೆ. ಈಗಂತೂ, ನಿಮ್ಮ ಯಜಮಾನರು ದೇಶಸೇವೆಗೆ ಹೊರಟುಬಿಟ್ಟಿದ್ದಾರೆ. ಅದರಿಂದ, ನಿಮಗೆ ಡಬ್ಬಲ್ congratulations ಹೇಳಬೇಕು. ನಿಮ್ಮ ಯಜಮಾನರ ಕನ್ನಡ ಲೆಕ್ಚರುಗಳು ಅದ್ಭುತವಂತೆ. ಎಲ್ಲರೂ ಕೊಂಡಾಡ್ತಾರೆ. ಅದೇನು style, ಏನು ಕಥೆ? ಬಹಳ ಗಟ್ಟಿಗರಮ್ಮ, ಅವರು. ನೀವೇ ಪುಣ್ಯವಂತರು.

(ಕೆಲವರು ಹೆಂಗಸರು "certainly, certainly" ಎನ್ನುವರು. ಉಳಿದವರು ನಗು ಮುಖದಿಂದ ತಲೆಹಾಕುವರು. ಇಂಗ್ಲೀಷ್ ತಿಳಿಯದೆ ಗೌರಮ್ಮನು ಪೆಚ್ಚುಮುಖ ಹಾಕಿಕೊಂಡು ನಿಂತಿರುವಳು.)

**ಯಶೋದಮ್ಮ.**—Thank you. Thank you.

**ರಂಗಮ್ಮ.**—ಇವತ್ತು gala day, gala day ಕಾಣ್ರಿ. ಅಲ್ಲವೇನ್ರೀ. ಗೌರಮ್ಮ ?

**ಗೌರಮ್ಮ.**—ಗಲಾಟೆ ಯೇನ್ಬಂತು ಅಂದರೆ. ಹತ್ತು ಜನ ಸೇರಿದರೆ ಸದ್ದು ಗಲಗಿಲ್ಲದೆ ಇದ್ದೀತೆ ? (ಉಳಿದವರೆಲ್ಲರೂ ನಗುವರು. ಬಳಿಕ ಗೌರಮ್ಮನು ತಾನೂ ನಗುವಳು.) ನನಗೆ ಇಂಗ್ಲಿಷ್ ಬರೋದಿಲ್ಲ. ನೀವೇನೋ ಹೇಳಿದರೆ ನಾನೇನೋ ತಿಳಿದುಕೊಂಡೆ ಅಂತ ಕಾಣುತ್ತೆ. ರಂಗಮ್ಮನವರಾದರೆ ಭಾರಿ ಅಡ್ವೋಕೇಟರ ಹೆಂಡತಿ. ನಾನು ಜೋಯಿಸರ ಹೆಂಡತಿ. ನನಗೆಲ್ಲಿ ಇಂಗ್ಲಿಷ್ ಬರಬೇಕು ಹೇಳಿ.

**ರಂಗಮ್ಮ.**—ಗಂಡಸರು ಬಹಳ ಮಾಯಾವಿಗಳು ಕಾಣ್ರಿ. ಅವರನ್ನು ಅಂಗಯ್ಯಲ್ಲಡಗಿಸಿಕೊಂಡಿರಬೇಕಾದರೆ ಇಂಗ್ಲಿಷ್ ಬಂದರೆ ಬಹಳ ಅನುಕೂಲ.

**ಗೌರಮ್ಮ.**—ಅದೆಲ್ಲಾ ಅವರವರ ಅನುಭವದ ಮೇಲೆ ಹೋಗುತ್ತೆ. ನನಗೆ ತೋರೋದರಲ್ಲೇನೋ ಗಂಡಸರು ಕಷ್ಟಪಡೋದೆಲ್ಲಾ ನಮಗೋಸ್ಕರವೇ ಅಂತ ನನ್ನ ಸಿದ್ಧಾಂತ. ನಾವು ಅವರ ಸೇವೆ ಮಾಡಿಕೊಂಡಿರೋದೇ ನಮ್ಮ ಧರ್ಮ.

**ಒಬ್ಬಾಕೆ.**—ಏನ್ರಿ ಯಶೋದಮ್ಮ, ಈ ಇಪ್ಪತ್ತನೇ ಶತಮಾನದಲ್ಲಿ ಹೀಗೆ ಹೇಳೋದನ್ನು ಕೇಳಿದರೆ ಆಶ್ಚರ್ಯವಮ್ಮ.

**ಮತ್ತೊಬ್ಬಾಕೆ.**—ಈ curious specimen ಎಲ್ಲಿ ಸಿಕ್ಕಿತರೀ ನಿಮಗೆ?

**ಗೌರಮ್ಮ.**—ಯಶೋದಮ್ಮ! ಅದೇನ್ರಿ ಅವರು ಹೇಳಿದ್ದು?

**ಯಶೋದಮ್ಮ.**—(ಸ್ವಲ್ಪ ಅಪ್ರತಿಭಳಾಗಿ, ಮತ್ತೆ ಮನಸ್ಸನ್ನು ಸರಿಮಾಡಿಕೊಂಡು) ಏನೂ ಇಲ್ಲ. ಈ ಕಾಲದಲ್ಲಿ ಈ ಅಭಿಪ್ರಾಯ ಇಟ್ಟುಕೊಂಡಿದ್ದೀರಿ ಅಂತ.

**ಗೌರಮ್ಮ.**—ಓಹೋ! ಧಾರಾಳವಾಗಿ, ಅದಕ್ಕೇನಮ್ಮ. ಸೀತೆ, ದಾಕ್ಷಾಯಿಣಿ, ಇವರೆಲ್ಲಾ ಹುಟ್ಟಿದ ದೇಶವಲ್ಲವೇ ಇದು!

**ರಂಗಮ್ಮ.**—ಅಹಲ್ಯೆ, ದ್ರೌಪದಿ, ತಾರೆ, ಇವರನ್ನೂ ಹೇಳ್ರಿ. ಅವರೂ ಬಹಳ ಬಹಳ ಪತಿವ್ರತೆಯರೇ ಅಲ್ಲವೆ? ಸಾಕಮ್ಮ, ನಿಮ್ಮ ಸೀತೇನ ಹೇಳಿ. Back bone ಇಲ್ಲದ ಅಕ್ಕಿ ಹಿಟ್ಟಿನ ಬೊಂಬೇನ. ಸೀತೆ ಸೀತೆ ಅಂತ ಅಳೋರು ಕೋತಿಗಳಾಗೋದೆ. ಗಂಡ, ಆ ಹುಚ್ಚ, ಕಾಡಿಗೆ ಹೋದನಂತೆ. ಅವನ ನೆರಳಿನಂತೆ ಕಾಡಿಗೆ ಹೋಗಿ ಹದಿನಾಲ್ಕು ವರುಷ ಇದ್ದು ಬಂದಳಂತೆ. ಆ ಮಹರಾಯಿತಿ ಇಟ್ಟ ಬೇಗೇನೇ ನಮಗೆ ಈಗ ಬಂದಿ ರೋದು. ಗಂಡಸರು ನಮ್ಮನ್ನು ತುಳಿದಿರೋದಕ್ಕೆ ಅದೇ ಕಾರಣ.

**ಯಶೋದಮ್ಮ.**—ಅದೇನೋ ನಿಜ. ಅಲ್ಲಾ, ರಾಮ ತಗ್ಗಿದಷ್ಟೂ ಅವಳನ್ನು ತುಳಿದೇಬಿಟ್ಟ. ಗರ್ಭಿಣೀನ ಕಾಡಿಗಟ್ಟಿದವನು ಅವನೆಂಥ ಹೇಡಿ. ಸೀತೆ ತನ್ನ rights declare ಮಾಡ್ದೇ ಬಿಟ್ಟದ್ದು ಶುದ್ಧ ತಪ್ಪು.

**ಗೌರಮ್ಮ.**—ಇದೇನು ಬಂತಮ್ಮ ಕೇಡುಗಾಲ! ದಾಕ್ಷಾಯಿಣಿ, ಅಂದರೆ ಅವಳನ್ನು ಬೈದಿರಿ. ಸೀತೆ, ರಾಮ, ಅಂದರೆ ಸಾಮಾನ್ಯವೇ? ಜಗತ್ತಿಗೇ ತಾಯಿ ತಂದೆ ಸಮಾನರು. ಅಂಥ ಸೀತೆ ಅಕ್ಕಿಹಿಟ್ಟಿನ ಬೊಂಬೆಯೆ? ಸೀತೆಯು ಸೊಟ್ಟ ಬೈತಲೆ ತೆಗೆದುಕೊಂಡು, ಗಂಟೆಗಂಟೆಗೆ ಒಂದೊಂದು ಬಟ್ಟಲು ಕಾಫಿ ಕುಡಿದುಬಿಟ್ಟಿದ್ದರೆ, ಈಗ ಅವಳನ್ನು ಯಾರೂ ಸ್ಮರಿಸಿಕೊಳ್ತಾಲೇ ಇರಲಿಲ್ಲ.

**ರಂಗಮ್ಮ.**—(ಕೋಪದಿಂದ) ನೋಡ್ರಿ ಯಶೋದಮ್ಮ! ಇದು too much.

**ಗೌರಮ್ಮ.**—ಅದೇನೋ ಕನ್ನಡದಲ್ಲೇ ಹೇಳಿ. ಇಂಗ್ಲಿಷ್ ಬೇಡ.

**ರಂಗಮ್ಮ.**—ನಾನು ಸೊಟ್ಟ ಬೈತಲೆ ತೆಕ್ಕೊಂಡರೆ ನಿಮಗೇನ್ರಿ? ನಿಮ್ಮ ಗಂಟೇನು ಹೋಯಿತೂ ಅಂತ.

**ಗೌರಮ್ಮ.**—(ರಂಗಮ್ಮನ ತಲೆಯನ್ನು ನೋಡಿ) ಅಯ್ಯೋ ಹೌದೇ? ಅಮ್ಮ, ನಾನು ನನ್ನ ಕಣ್ಣಾಣೆಗೂ ನಿಮ್ಮ ಬೈತಲೆ ನೋಡಿ ಹಾಗೆನ್ನಲಿಲ್ಲ. ಏನೋ ಮಾತಿನ ಸರಣೀಲಿ ಮಾತು ಹೊರಟುಹೋಯಿತು.

**ರಂಗಮ್ಮ.**—ದಸ ತಿನ್ನೋರಿಗೆ ಗೊಬ್ಬರದ ಆಣೆ ಅಂದ ಹಾಗೆ, ಎದುರಿಗೆ ನೋಡ್ತಾ ಇದ್ದೀರಿ. ನೋಡಲಿಲ್ಲವಂತೆ, ನೋಡಲಿಲ್ಲ. (ಹಲ್ಲು ಕಡಿಯುವಳು.)

**ಗೌರಮ್ಮ.**—ನಾನು ಖಂಡಿತ ನೋಡಲಿಲ್ಲ. ಬಾಯಿತಪ್ಪಿ ಮಾತು ಹೊರಟುಹೋಯಿತು. ನೀವು ಸೀತೆ, ದಾಕ್ಷಾಯಿಣಿ, ಇವರನ್ನೆಲ್ಲಾ ಬೈದ ರಲ್ಲ. ನನಗೆ ಸಂಕಟವಾಯಿತು. ನಿಮ್ಮದು ಸೊಟ್ಟ ಬೈತಲೆ ಅನ್ನೋ ಜ್ಞಾನವೇ ಇಲ್ಲದೆ, ನಾನೂ ಅಂದುಬಿಟ್ಟೆ.

**ರಂಗಮ್ಮ.**—ತಿರುಗಿ ಸೊಟ್ಟ ಬೈತಲೆ ಮಾತು. Adding insult to the injury. ಇಷ್ಟು ದಾಕ್ಷಾಯಣಿಗೆ ಅಳೋರು ನೀವ್ಯಾತಕ್ಕೆ ಅವಳ ಹಾಗೆ ಮಾಡಲಿಲ್ಲ? ಅವತ್ತು ಇವರ ಯಜಮಾನರು ನಿಮ್ಮ ಯಜಮಾನ ರನ್ನ ಬೈದು ಬುದ್ಧಿ ಕಲಿಸಿದರಲ್ಲಾ, ಆಗ ಪತಿನಿಂದೆಯನ್ನು ಕೇಳಲಾರದೆ ನೀವು ಹಾಯಾಗಿ ಪ್ರಾಣಬಿಡಬಹುದಾಗಿತ್ತಲ್ಲ. Dirty followers of dirty principles.

**ಒಬ್ಬಾಕೆ.**—ಯಶೋದಮ್ಮನೋರದೇ ತಪ್ಪು ಕಾಣ್ರಿ. ಅವರು ಹೋಮಕುಂಡ ಏರ್ಪಡಿಸಿರಲಿಲ್ಲ. ಏರ್ಪಡಿಸಿದ್ದರೆ ಇವರೂ ಬಂದು ಬಿದ್ದು ಪ್ರಾಣ ಬಿಟ್ಟುಬಿಡ್ತಾ ಇದ್ದರು.

**ಗೌರಮ್ಮ.**—ನಮ್ಮ ಯಜಮಾನರನ್ನ ಬೈದದ್ದು ನಿಮಗೆ ಯಾರು ಹೇಳಿದರು?

**ರಂಗಮ್ಮ.**—ಯಾರೇನು ಹೇಳೋದು? ಯಶೋದಮ್ಮನೋರೇ ಹೇಳಿದರು. ಯಶೋದಮ್ಮ, ನೀವು ಹೇಳಲಿಲ್ಲವೇನ್ರಿ?

**ಯಶೋದಮ್ಮ.**—(ಅನುಮಾನಿಸಿ) ಊ. ಹೇಳಿದೆ. ನಿಜ ಹೇಳಿದ ರೇನು ತಪ್ಪು?

**ಗೌರಮ್ಮ.**—ಅಬ್ಬ! ಇದನ್ನ ದೊಡ್ಡಮಾತು ಅಂತ ಹೇಳಿದಿರೇನೊ? ನಾನೂ ನಿಜ ಹೇಳ್ತೇನೆ. ಹೇಳಿದರೇನೂ ತಪ್ಪಿಲ್ಲವಲ್ಲ. ನೀವೇ ಒಪ್ಪಿದ್ದೀ ರಲ್ಲ. ನಿಮ್ಮ ಯಜಮಾನರಿಗೆ ಕನ್ನಡ ಚೆನ್ನಾಗಿ ಬರದೆ ರಾಮಚಂದ್ರನ್ ಕೈಯಲ್ಲಿ ಬರೆಸಿಕೊಂಡು ಮೆಂಬರಾದ ಹಾಗೆ ನಮ್ಮ ಯಜಮಾನರೇನೂ

ಮಾಡಲಿಲ್ಲ. ಈ ಸಂಗತಿ ಕೇಳಿ ಉಳಿದ ಮೆಂಬರುಗಳೆಲ್ಲಾ ಎಷ್ಟು ನಗ್ತಾರೋ! ಅವರು ಯಾರೂ ಹೀಗೆ ಮಾಡಿಲ್ಲ.

**ಯಶೋದಮ್ಮ.**—ಅಗಳು ಎರಚಿದರೆ ಕಾಗೆಗಳಿಗೇನ್ರಿ ಕಡಮೆ? ಆ ಹಾಳು ಕನ್ನಡ ಒಂದು ಭಾಷೆ. ಅಲ್ಲವೆ? ಗತಿಗೆಟ್ಟ ಭಾಷೆ.

**ಗೌರಮ್ಮ.**—ಆ ಗತಿಗೆಟ್ಟ ಭಾಷೆಯೂ ಬರದೇ ಇರೋರೊ? ಅಗಳು ಬಹಳ ಎರಚಿದಿರಿ. ಆ ಹುಡುಗ ಬಿ.ಎ.ಗೆ ಕಟ್ಟೋದೂ ತಪ್ಪಿಹೋಯಿತು. ಇಲ್ಲದ ನೆವ ಇಟ್ಟುಕೊಂಡು ಅವನ್ನ ಓಡಿಸಿದಿರಿ.

**ಯಶೋದಮ್ಮ.**—ಅದನ್ನು ಜ್ಞಾಪಿಸಿಕೊಂಡರೆ ನನ್ನ ಮೈ ಉರಿದು ಹೋಗುತ್ತೆ. ನೋಡ್ರಿ, ರಂಗಮ್ಮ, ನಾನು "ಜಗದುದ್ಧಾರನ ಆಡಿಸಿದಳು ಯಶೋದ" ಅನ್ನೋ ಹಾಡು ಹೇಳ್ತಾ ಇದ್ದೆ. ನಮ್ಮ ಯಜಮಾನರು ತಮಾಷೆಗೆ ನಿನ್ನ ಮಗ ಜಗದುದ್ಧಾರಕನೋ ಅಂದು ಹಾಸ್ಯಮಾಡಿದರು. ನಾನು "ಏನಾಗ್ತಾನೋ ನಮ್ಮ ಕಿಟ್ಟು? ಯಾರು ಕಂಡಿದ್ದಾರೆ" ಅಂದೆ. ಆಗ ಆ ತುಂಟ, ಆ ಅಯೋಗ್ಯ, "ಆಗ್ತಾನೆ, ಆಗ್ತಾನೆ, ಪಿಚಾಚಿ ಯಾಗ್ತಾನೆ, ಅಷ್ಟೆ. ಅವನೂ ನಾನೂ ಇನ್ನೇನಾಗಬೇಕು" ಅಂದ. ನಮಗೆ ರೇಗಿಹೋಯಿತು. ಓಡಿಸಿಬಿಟ್ಟೆವು. ಒಬ್ಬ ಹುಡುಗನ್ನ ಹಿಡಿದು ಕೊಂಡಿದ್ದೇವೆ. ಅಶ್ರೇಯಸ್ಸು ಕೋರಿದ. ನೀಚ.

**ಗೌರಮ್ಮ.**—ನಮಗೆ ನಿಮ್ಮಹಾಗೆ ಇಂಗ್ಲಿಷು, ಈ ನಾಗರೀಕತೆ ಇಲ್ಲದೆ ಇದ್ದರೂ, ನಮಗೂ ಬುದ್ಧಿ ಇದೆ. ಮೆಂಬರಾಗಿರೋರಲ್ಲಿ ಎಷ್ಟೆಷ್ಟು ಒಳ್ಳೆಯವರೋ, ಎಷ್ಟೆಷ್ಟು ಗಟ್ಟಿಗರೋ, ಹ್ಯಾಗೆ ಹ್ಯಾಗೆ ಇರೋರೋ ಇದ್ದಾರೆ. ನಿಮ್ಮ ಮಗನ ಜೊತೆಯಲ್ಲಿ ನಿಮ್ಮ ಮನೆಯ ಹುಡುಗನ ಹಾಗಿದ್ದವನಲ್ಲಿ ಸ್ವಲ್ಪ ಕ್ಷಮಾಗುಣ ತೋರಿಸಲಾರದೆ ಹೋದವರು ದೇಶ ಸೇವೆ ಏನು ಮಾಡ್ತೀರೋ ಕಾಣೆನಮ್ಮ. ರಾಮು ಹೇಳೋಹಾಗೆ ನಮ್ಮ ದೇಶದ ನಾಡಿ ಇರೋದು ಹಳ್ಳೀಲಿ. ಪಟ್ಟಣದಲ್ಲಿ ನಾವು ಎಷ್ಟು ಕುಣಿದರೂ ಪ್ರಯೋಜನವಿಲ್ಲ.

**ಯಶೋದಮ್ಮ.**—ಹುಡುಗನಂತೆ, ಹುಡುಗ. ಅವನಿಗೇನು ಕೇಡು. ದೊಡ್ಡ ಧಾಂಡಿಗ. ನಾವೇನೂ ಇಲ್ಲಿ ನಿಮ್ಮ ಲೆಕ್ಚರಿಗೆ ಏರ್ಪಾಡು

ಮಾಡಿಲ್ಲ. ಬೇಕಾದರೆ ಸುಮ್ಮನೆ ಇರಿ. ಸಾಕಾದರೆ ಹೊರಡಿ. ನಮ್ಮ ಹುಡುಗನಿಗೆ ನಿಮ್ಮ ಹುಡುಗಿ ತಂದುಕೊಳ್ಳೋದಿಲ್ಲ. ಇನ್ನು ಅದರ ಹಂಬಲನ್ನೇ ಬಿಡಿ.

**ಗೌರಮ್ಮ.**—ನೀವು ಕೇಳಿದರೂ ನಾವು ಕೊಡೋದಿಲ್ಲ. ಇಲ್ಲಿರೋಕೆ ನಾನೇನೂ ಗತಿಗೆಟ್ಟು ಬಂದಿಲ್ಲ. ಸಾಲಿಗೆ ಮೇಜಿನ ಮೇಲೆ ಬಟ್ಟೆ ಹಾಸಿ ಕೊಂಡು ಎಲ್ಲರ ಎಂಜಲೂ ಎಲ್ಲರೂ ತಿಂದು ಪಾವನವಾಗೋದು ನಿಮಗೇ ಇರಲಿ. ಅಲ್ಲಾ, ಚೌಲಪಬ್ಬಿ ಊಟದಲ್ಲಿ ಕೂಡ, ಉಪನಯನವಾಗೋ ಹುಡುಗನಿಗೆ ತಾಯಿ ಇಲ್ಲದೆ ಇದ್ದರೆ, ಬಲತಾಯಿ ಎಲೆ ಬೇರೆ ಎಳೆದು ಅವಳ ಎಂಜಲು ಸೋಕದಂತೆ ಮಾಡ್ತಾರೆ. ಇಲ್ಲಿ ದೊಡ್ಡೋರೇ ಸೇರಿ, ಎಲ್ಲರೂ ಎಂಜಲು ತಿಂದರೆ ಯಾವ ದೇವರಿಗೆ ಪ್ರೀತಿಯೋ ಕಾಣೆ. ನಮ್ಮ ಯಜಮಾನರು ಹೇಳೋದೇ ಸರಿ. ಹಿಂದಿನ ಕಾಲದವರು ಕೆಲವು ತಪ್ಪು ಮಾಡ್ತಾ ಇದ್ದರು. ಅದನ್ನ ನಾವು ಪೂರ್ವಾಚಾರಾ ಅಂತ ಪೂಜೆ ಮಾಡ್ತಾ ಇದ್ದೀವಿ. ಈಗಿನೋರು ಕೆಲವು ತಪ್ಪು ಮಾಡ್ತಾ ಇದಾರೆ. ಅದನ್ನು ಉದ್ಧಾರದ ಲಕ್ಷಣ ಅಂತ ಭಾವಿಸಿ ಅವಕ್ಕೆ ಶರಣುಹೊಡೀತಾ ಇದ್ದೀವಿ. ಲಕ್ಚರಂತೆ ಲಕ್ಚರು. ನಾನೂ ಲಕ್ಚರು ಹೇಳೋಕೆ ಬಂದಿಲ್ಲ. ಇವರ ಯಜಮಾನರು ಅಂದರಂತೆ, ನಮ್ಮೋರನ್ನ. ಎಲ್ಲಾ ಕಡೇಲೂ ದಿಕ್ಕೆಟ್ಟು ಅಲೆಯೋ ಪುರೋಹಿತರುಗಳು ಕೆಲವರಿರ್ತಾರಲ್ಲಾ, ಅವರ ಹಾಗೆ ನಮ್ಮ ಯಜಮಾನರು ಧರ್ಮ ಕರ್ಮಕ್ಕೆ ಎಳ್ಳು ನೀರೂ ಬಿಟ್ಟ ಮನೆಹಾಳರಲ್ಲ. ಎಂಜಲು ತಿನ್ನೋದು ಹ್ಯಾಗಪ್ಪಾ ಅಂತಿದ್ದೆ. ಅದೇ ಯೋಚನೆ ಮಾಡ್ತಾ ವೈಗೆ ಚೆನ್ನಾಗಿಲ್ಲ ಅಂತ ಹೇಳೋಣ ಅಂತಿದ್ದೆ. ದೇವರ ದಯ ಒದಗಿತು. ಸುಳ್ಳು ಹೇಳೋದೇ ತಪ್ಪಿತು. ಹೋಗಿ ಬರ್ತೀನೆ.

**ರಂಗಮ್ಮ.**—ಯಶೋದಮ್ಮ, ನಾನೂ ನಿಮ್ಮ ಹಾಗೇ ದೊಡ್ಡ ವಂಶದಲ್ಲಿ ಹುಟ್ಟಿ ದೊಡ್ಡ ವಂಶಕ್ಕೆ ಸೇರಿದೋಳು. ನಿಮ್ಮ feelings ಹೇಗಿದೇ ಅನ್ನೋದು ನಾನು ಬಲ್ಲೆ. ಈಕೆ ಅಂದುಕೊಂಡು ಒಡಕು ಮಡಕೆಗೆ ಗಜ್ಜುಗ ಹಾಕಿದ ಹಾಗೆ ಆಡಿ ಮುಗಿಸಲಿ. These are horrible boobies, you know.

**ಗೌರಮ್ಮ.**—(ರೇಗಿ) ನಿಮ್ಮ ದೊಡ್ಡಸ್ತಿಕೇಗಷ್ಟು ಮಂಗಳಾರತಿ. ಏನ್ರಿ, ಒಳ್ಳೇ ಮಾತಿನಲ್ಲಿ ಬೂಬಿ ಅಂತ ಬೈತೀರಿ. ಬೂಬಿ, ದೊರೆಸಾನಿ, ಎಲ್ಲಾ ನೀವೇ ಆಗಿ. ಬೂಬಿಯಂತೆ ಬೂಬಿ. ಇವತ್ತು ಎದ್ದ ಹೊತ್ತಿನ ಗಳಿಗೆ ಸರಿಯಾಗಿಲ್ಲ. ಅನಿಷ್ಟ ಸಹವಾಸ. (ಹೋಗುವಳು.)

**ರಂಗಮ್ಮ.**—ಸದ್ಯ ಶನಿ ತೊಲಗಿದ ಹಾಗಾಯಿತು. ಅಮ್ಮಮ್ಮ! ಎಷ್ಟು ಒರಟುತನ, ಏನುಕಥೆ! ಸ್ವಲ್ಪವಾದರೂ ಕಲ್ತಾರೇ ಬೇಡವೆ? ಇವರಿಗೆಲ್ಲಾ ಇಂಥ ಹಾಳು ಬುದ್ಧಿ ಇರೋಕೆ ಮೂಲಕಾರಣ, ಆ ಹಾಳು ರಾಮಾಯಣ, ಭಾರತ, ಇಂಥ ಪುಸ್ತಕಗಳು. ಯಾರೋ ಪುಣ್ಯಾತ್ಮರು ಮನುಸ್ಮೃತಿ ಸುಟ್ಟರಂತೆ. ಈ ರಾಮಾಯಣ ಭಾರತಾನೂ ಎಂದು ಸುಡ್ತಾರೋ ಕಾಣೆ.

**ಒಬ್ಬಾಕೆ.**—ಹೀಗೆ ಮಾತ್ರ ಹೇಳಬೇಡಿ, ಕಂಡಿರಾ. ರಾಮಾಯಣ ಪರದೇಶದೋರೆಲ್ಲಾ ಹೊಗಳ್ತಾರಂತೆ. ನಮಗಾದರೆ ಅದು ಹಿತ್ತಲಗಿಡವಾಗಿದೆ. ಹೊರಗಿನೋರ ಒಳ್ಳೆ ಗುಣ ಮಾತ್ರ ನಾವು ಗ್ರಹಿಸಬೇಕು. ಅದರಲ್ಲಿ ಮಾತ್ರ ಅವರಂತೆ ನಡೀಬೇಕು. ಈ ಊರಿನಲ್ಲಿ ಆ ದೊಡ್ಡ ಸಮಾಜ ಸ್ಥಾಪಿಸಿದರಲ್ಲಾ, ಆ ಮಹಾತಾಯಿ, ಅವರ ನಡೆನುಡಿಗಳೆಲ್ಲಾ ಅಚ್ಚ ಹದಿನಾರಾಣೆ ಹಿಂದುಗಳದು. ಅವರ ಹಣೆ ಕುಂಕುಮವೊಂದೇ ಸಾಕು. ಕನ್ನಡ, ಇಂಗ್ಲೀಷು, ಸಂಸ್ಕೃತ, ಎಲ್ಲಾ ಓದಿದರೂ ಹಾಗೆ ದೊಡ್ಡ ನಡತೆ ಇರಬೇಕು. ಹಾಗಿರೋರೂ ಇದ್ದಾರೆ.

**ಮತ್ತೊಬ್ಬಾಕೆ.**—ಮನುಸ್ಮೃತೀಲಿರೋ ಕೆಲವು ಭಾಗ ಸರಿಬೀಳದೆ ಕೆಲವರು ಅದನ್ನು ಸುಟ್ಟರು. ಬಸವೇಶ್ವರನ ವಚನಗಳಲ್ಲಿರೋ ಕೆಲವು ಭಾಗದಲ್ಲಿ ಬ್ರಾಹ್ಮಣರ ನಿಂದೆಯಿದೆಯಂತೆ. ಅದನ್ನು ಬ್ರಾಹ್ಮಣರು ಸುಡಲಿ. ಸ್ಮಾರ್ತರ ಗ್ರಂಥ ವೈಷ್ಣವರಿಗೆ ಸರಿಬೀಳೋದಿಲ್ಲ. ಅವರು ಸ್ಮಾರ್ತರ ಗ್ರಂಥಗಳನ್ನು ಸುಡಲಿ. ಮುದ್ರೆಯೋರ ಪುಸ್ತಕಗಳನ್ನ ನಾಮದೋರು ಸುಡಲಿ. ನಾಮದೋರ ಪುಸ್ತಕಗಳನ್ನೆಲ್ಲಾ ಅಡ್ಡಗಂಧದೋರು ಅಗ್ನಿಗೆ ಆಹುತಿ ಹಾಕಲಿ. ಬ್ರಾಹ್ಮಣರೂ ಬ್ರಾಹ್ಮಣರಲ್ಲದವರೂ, ಹೀಗೆ ಮಾಡ್ತಾ ದೋಷ ತಳ್ಳಿ ಗುಣಗ್ರಹಿಸದೆ ಬಿಟ್ಟುಬಿಡ್ತಾ ಬಂದರೆ, ಹಿಂದೂ ಮತದ ಎಲ್ಲಾ ಗ್ರಂಥ

ಗಳೂ ಬೂದಿ ಕುಪ್ಪೆಯಾಗಬೇಕಾಗುತ್ತೆ; ಎಲ್ಲಾ ಮತದೋರೂ ಹೀಗೆ ಮಾಡಿದರೆ, ಇನ್ನೂ ಚೆನ್ನ. ಪುಸ್ತಕಭಂಡಾರಗಳೇ ಆಂಜನೇಯ ಬಿಟ್ಟು ಹೋದ ಲಂಕಾಪಟ್ಟಣ.

**ಯಶೋದಮ್ಮ.**—(ಸ್ವಗತ) ಉಳಿದ friends ಬೇಗ ಬಂದರೆ ಸಾಕು, ಟೀ ತೊಗೋಬಹುದು. ಗುಟ್ಟು ರಟ್ಟಾಗಿಹೋಯಿತು. ಇವತ್ತು ಯಾಕೋ ಲೆಕ್ಚರ್ ಕ್ಲಾಸಿಗೆ ಪ್ರಾರಂಭವಾದ ಹಾಗಿದೆ. (ಪ್ರಕಾಶ) ರೀ, ರಂಗಮ್ಮ, ನಮ್ಮ ಕಿಟ್ಟು ಇನ್ನು ಮೂರು ತಿಂಗಳಿಗೆ ಇಂಗ್ಲೆಂಡಿಗೆ ಹೋಗ್ತಾನೆ.

(ತೆರೆಯು ಬೀಳುವುದು.)

# ನಾಲ್ಕನೆಯ ಅಂಕ

## ದೃಶ್ಯ ೧

[ಮುಂಬಯಿ ನಗರದಲ್ಲಿ ಬಾಬೂಲನಾಥ ದೇವಸ್ಥಾನಕ್ಕೆ ಹೋಗುವ ದಾರಿ. ಭಿಕ್ಷುಕನಂತೆ ಇರುವವನೊಬ್ಬನು ಹಾಡು ಹೇಳುವನು. ಬಳಿಕ, "ಸೇಟ್, ಸೇಟ್‌ಜಿ, ಸೇಟ್‌ಜಿ" ಎಂದು ದೈನ್ಯಸ್ವರದಿಂದ ಹೇಳುತ್ತ ಕಾಸಿಗೆ ಬೊಗಸೆಯೊಡ್ಡುತ್ತಿರುವನು. ಇಬ್ಬರು ಧನಿಕರು ಅವನಿಗೆ ಏನನ್ನೂ ಕೊಡದೆ ಮುಂದೆ ತೆರಳುವರು. ಅವರಲ್ಲಿ ಒಬ್ಬನು ಅವನ ಕಡೆಗೇ ನೋಡದೆ ಅಸಡ್ಡೆಯಿಂದ ಹೋಗುವನು. ಮತ್ತೊಬ್ಬನು ಅವನನ್ನು ಆಪಾದಮಸ್ತಕವಾಗಿ ನೋಡಿ ಮುಂದಕ್ಕೆ ಹೊರಡುವನು. ಆ ಬಳಿಕ ರಾಮಚಂದ್ರ್ರ ಹೆಚ್ಚು ಧನಿಕನೂ, ಬಡವನೂ ಅಲ್ಲದ ಸಾಮಾನ್ಯ ತರಗತಿಯವನಂತೆ ಉಡುಪನ್ನು ಧರಿಸಿ ಪ್ರವೇಶಿಸುವನು. ಅವನು ಏನೋ ಯೋಚನೆಯಲ್ಲಿ ಮಗ್ನನಾಗಿರುವನು. ಭಿಕ್ಷುಕನ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳದೆ ಮುಂದಕ್ಕೆ ಹೋಗುತ್ತಿರುವನು.]

**ಭಿಕ್ಷುಕ.**—ಶಿವರಾತ್ರಿ. ಕಲ್ಲಿನ ಗುಡೀಲಿ ಕಲ್ಲಿನ ಲಿಂಗ ನೋಡಿ ಬಂದಿದ್ದಾರೆ. ಒಬ್ಬನೂ ಒಂದು ಕಾಸೂ ಕೊಡ. ಮುಂದಿನ ವರುಷವೂ ಕಲ್ಲು ಮನಸನ್ನು ಕೊಡಪ್ಪಾ ಅಂತ ಕಲ್ಲಿನ ಶಿವನನ್ನು ಕೇಳಿಬಂದಿರಬಹುದು. ಅಯ್ಯೋ ದೇವ್ರು!

**ರಾಮಚಂದ್ರ್ರ.**—(ಚಮಕಿತನಾಗಿ) (ಸ್ವಗತ) ಭಿಕ್ಷುಕನಾದರೂ ಎಂತಹ ಭಾವವನ್ನು ಸೂಚಿಸಿರುವನು! (ಒಂದೆರಡು ಹೆಜ್ಜೆ ಹಿಂದಕ್ಕೆ ಸರಿದು) ಗಮನಿಸಲೇ ಇಲ್ಲವೇ ನಾನಿವನನ್ನು! (ಪ್ರಕಾಶ) ಯಾರಯ್ಯ ನೀನು?

**ಭಿಕ್ಷುಕ.**—(ಸಂತೋಷದಿಂದ ಉಬ್ಬಿ) ಕನ್ನಡು, ನಮ್ಮ ಕನ್ನಡು ಮಾತಾಡೋರು. ನಮ್ಮ ಕನ್ನಡು ಕಿವಿಗೆ ಬಿತ್ತು. ಹಸಿವೂ ಸ್ವಲ್ಪ ಕಡಿಮೆ ಯಾದಂತಾಯ್ತದೆ. ನಾನು ಯಾರಾದರೇನು? ನಮ್ಮ ಕನ್ನಡು ಈ ಕೊಂಪೆಯಲ್ಲಿ ಕೇಳಿಸಿದ್ರುಲ್ಲ.

**ರಾಮಚಂದ್ರ್ರ.**—(ಸ್ವಗತ) ಇದೀಗ ಭಾಷಾಮಮತೆ. (ಭಿಕ್ಷುಕನಿಗೆ ಎರಡಾಣೆಯನ್ನು ಕೊಡುವನು.)

**ಭಿಕ್ಷುಕ.**—(ಕೃತಜ್ಞತೆಯಿಂದ) ಸೂರು ವರುಷ ತಣ್ಣಗೆ ಬದುಕು ಧೊರೆಯೆ. ನಾನೂ ಹುಟ್ಟುತಾ ಭಿಕಾರಿಯಲ್ಲ. ಏನೇನೋ ಕಷ್ಟದಮೇಲೆ ಕಷ್ಟ ಬಂದು ಈ ಪಾಡು ಬಂತು.

**ರಾಮಚಂದ್ರ್ರ**—ರಟ್ಟೆಯನ್ನು ಮುರಿದು ರೊಟ್ಟಿಯನ್ನೇಕೆ ತಿನ್ನ ಬಾರದೊ? ಈ ಮೈಗಳ್ಳತನವೇಕೆ? ಈ ಹಾಳು ಜೀವನವೇಕೆ?

**ಭಿಕ್ಷುಕ.**—ನಾನು ಈ ಹಾಳು ಕೊಂಪೆಗೆ ಬಂದದ್ದೇ ಕೆಲಸ ಮಾಡೋಕೆ. ಧಣಿ ದೊರೆಯುಲಿಲ್ಲ. ಕೈಲಿ ಕಾಸಿಲ್ಲ. ಭಿಕ್ಷ ಹುಟ್ಟೋದಿಲ್ಲ. ಊರಿಗೆ ಹೋಗೋಕೆ ಯತ್ನವಿಲ್ಲ. ಇವತ್ತು ಬೆಳಗಿನಿಂದ ಏನ್ನೂ ತಿಂದಿಲ್ಲ.

**ರಾಮಚಂದ್ರ್ರ.**—ನನ್ನ ಹತ್ತಿರ ಕೆಲಸ ಮಾಡ್ತೀಯ?

**ಭಿಕ್ಷುಕ.**—ನಿಜವಾಗ್ಲೂನ?

**ರಾಮಚಂದ್ರ್ರ.**—ನಿಜವಾಗಿ.

**ಭಿಕ್ಷುಕ.**—ನಾನು ಬದೀಕ್ಕೊಂಡೆ, ಮಹರಾಯರೆ. ನನ್ನ ಚರ್ಮ ಬೇಕಾದರೂ ಕೊಡ್ತೀನಿ, ನಿಮ್ಮ ಕಾಲಿಗೆ ಜೋಡಾಗೋಕೆ. ಒಳಗಿನ ಜ್ಯೋತಿಯೇ ಸಾಕ್ಷಿ.

**ರಾಮಚಂದ್ರ್ರ**—(ಮತ್ತೆರಡು ಆಣೆಗಳನ್ನು ಕೊಟ್ಟು) ನೀನು ಹೊಟ್ಟೆಗೆ ಆಧಾರಮಾಡಿಕೊಂಡು ಚೌಪಾತಿ ಬಳಿಗೆ ಬಾ.

(ಭಿಕ್ಷುಕನು ಕೈಮುಗಿದು ಹೊರಡುವನು, ರಾಮಚಂದ್ರನ್ ಯೋಚಿಸುತ್ತ ನಿಲ್ಲುವನು.)

**ನಾರಾಯಣಶಾಸ್ತ್ರಿ.**—(ಪ್ರವೇಶಿಸಿ) Hullo ರಾಮಚಂದ್ರನ್! ಏನಯ್ಯ ಹೀಗೆ ಯೋಚಿಸುತ್ತಾ ನಿಂತಿದ್ದೀಯೆ?

**ರಾಮಚಂದ್ರ್ರ.**—ನಾವೆಲ್ಲರೂ ಭಿಕ್ಷುಕರಾಗಿದ್ದೂ ಭಿಕ್ಷುಕನೆಂದು ಬಂದವನನ್ನು ಬೈದು ಬಿಡುವೆವಲ್ಲಾ ಎಂತ.

**ನಾರಾಯಣಶಾಸ್ತ್ರಿ.**—ನಿನ್ನ philosophy ಹೇಳಪ್ಪ! ನೀನು ಭಿಕ್ಷುಕನೆಂದರೇನಯ್ಯ? By leaps and bounds ಧನಿಕನಾಗ್ತಾ ಇದ್ದೀಯೆ. ಇನ್ನೂ ಅದೆಲ್ಲಾ ನಮಗೆ ಹೇಳು. ನಿರುದ್ಯೋಗದ ಪಟಾಲಂ ಸೇರಬೇಕಾಗುತ್ತೆ ಅಂತ ತಿಳಿದೂ ತಿಳಿದೂ, ಓದಿ ಓದಿ ಮಂಕು ದಿಣ್ಣೆಗಳಾಗ್ತಾ ಇದ್ದೇವಲ್ಲ—ನಮಗೆ ಹೇಳು.

**ರಾಮಚಂದ್ರ.**—"ನಮಗೆ ಅದು ಕೊಡು, ಇದು ಕೊಡು" ಎಂದು ಭಗವಂತನನ್ನು ಬೇಡುತ್ತಿರುವವರೆಲ್ಲಾ ಭಿಕ್ಷುಕರೇ. ಆದರೆ, ನಮ್ಮನ್ನು ಬೇಡೋಕೆ ಬಂದವರಿಗೆ ಮಾತ್ರ, ಮುಖದ ಮೇಲೆ ಬಡಿದಹಾಗೆ ಮಾತನಾಡಿ ಅವರ ಪ್ರಾಣ ಹಿಂಡಿ ಕಳುಹಿಸಿಬಿಡುವುದರಲ್ಲಿ ನಾವು ನಿಸ್ಸೀಮರು. ಬದುಕಿನ ಒಳಮಾರ್ಗ ಅರಿಯಬೇಕಾದರೆ, ಭಿಕ್ಷುಕರಿಂದಲೂ ಕಲಿಯಬೇಕಾದ್ದು ಬೇಕಾದಷ್ಟಿದೆ. ಇದು ಹೋಗಲಿ. ನೀನೇನಯ್ಯ, ಟೆಕ್ನಿಕಲ್ ಎಜುಕೇಷನ್ ತೊಗೋತಾ ಇದ್ದೀಯೆ. ಅದೂ ನೇಗೆ ಕೆಲಸದಲ್ಲಿ. ನಿನಗೇನು? ಯಾವ ಮಿಲ್ಲಿನಲ್ಲಾದರೂ ಸ್ಪಿನ್ನಿಂಗ್ ಮಾಸ್ಟರ್ ಕೆಲಸ ಸಿಕ್ಕುತ್ತೆ.

**ನಾರಾಯಣಶಾಸ್ತ್ರಿ.**—ಏನು ಸಿಕ್ಕುತ್ತೋ, ಏನು ಗೋಳೋ! ಬಿ.ಎ. ಪರೀಕ್ಷೇಲಿ ಪಲ್ಟಿಹೊಡೆದು ಇದಕ್ಕೆ ಬಂದೆ. ಸದ್ಯ ಈ ಕಾಲದಲ್ಲಿ ಯಾರಾದರೂ rich father-in-law ಸಿಕ್ಕಿಬಿಟ್ಟು, ಅಂಥ ಐಶ್ವರ್ಯವಂತರ ಮನೆ ಹೆಣ್ಣು ಮದುವೆಯಾಗಿ, ಸುಖವಾಗಿ ಕಾಲಕಾಲಕ್ಕೆ ಸುಕುಮಾರ ತರವಾದ ಇಡ್ಲಿ, ದಮರೋಟ್ ಮುಂತಾದುವುಗಳು ಬಿದ್ದರೆ ಹಾಯಾಗಿರ ಬಹುದಪ್ಪ. ಈ ನಿರುದ್ಯೋಗದ ಹಾವಳಿಗೆ ಅದೇ ಸಿದ್ಧೌಷಧ. ಎಲ್ಲರೂ ನಿನ್ನ ಹಾಗೆ ಸ್ವಾವಲಂಬನದಿಂದ ಇಂಥ ಬೊಂಬಾಯಿ ಪಟ್ಣಕ್ಕೆ ಬಂದು, ಇಲ್ಲಿ Business ಹೂಡಿ, ಹಣದೋಚ್ತಾ ಇರೋದು ಅಂದರೆ ಸಾಮಾನ್ಯರಿಗೆ ಸಾಧ್ಯವೆ? ಆದರೆ ಒಂದೇನೋ ವಿಶೇಷ. ನೀನು ಸರಿಯಪ್ಪ; ಮೊದಲಿಂದಲೂ ನಿಗರ್ವ ಶಿರೋಮಣಿ. ಅಬ್ಬ! ಊದುಕಡ್ಡಿ ವ್ಯಾಪಾರ ಪ್ರಾರಂಭಮಾಡಿ Vitamins Hotel ಇಡೋವರೆಗೂ ಬಂದುಬಿಟ್ಟೆಯಲ್ಲ. ಏನಯ್ಯ, ಈ ಹೋಟ್ಲೇನಾದರೂ success ಆದೀತೆ? ನೀನು ಲಾಟರಿ ಹಾಕಿದ ಹಾಗೆ ಮಾಡಿಬಿಟ್ಟಿದ್ದೀಯೇ ಕೆಲಸ!

**ರಾಮಚಂದ್ರ.**—ಅದೃಷ್ಟವಿದ್ದರೆ, ಆಗದೇ ಏನಯ್ಯ? ನನಗೆ ಒಬ್ಬ ನಂಬಿಕೆ ಆಳು ಬೇಕಾಗಿತ್ತು, ಎಲ್ಲ ಆಳುಗಳ ಮೇಲೂ ಕಣ್ಣಿಟ್ಟು ನೋಡಿಕೊಳ್ಳೋಕೆ. ಅಂಥವನೂ ಇವತ್ತು ದೊರೆತ. ಮೊನ್ನೆ ಮೊನ್ನೆ ಡಾಕ್ಟರ್ ಮಸಾರಿಕ್ ಬರೆದಿರೋ ಪುಸ್ತಕದಲ್ಲಿ "Indeed, it is no paradox to say that civilized mankind does not yet know how to eat." ಅಂತ ಘಂಟಾ ಘೋಷವಾಗಿ ಹೇಳಿದ್ದಾನೆ. ಹಿಂದೆ ಒಬ್ಬ ಪುಣ್ಯಾತ್ಮ

ಮದರಾಸಿನಲ್ಲಿ ಕಲಗಚ್ಚಿಗೆ ವಾಸನೆ, ಬಣ್ಣ ಎರಡೂ ಕಟ್ಟಿ ಆ ಕಲಗಚ್ಚು ಮಾರಿ ಕಾಸು ತೆಗೆದನಂತೆ. ಈಗ ವಿಟಮಿನ್ಸ್ ಸಿದ್ಧಾಂತ ಬಂದಿದೆ. ಈಗ ಅದಕ್ಕೆ ನವಯೌವನ. ಬಲೆ ಬೀಸಿ ಮೀನು ಹಿಡಿಯೋಕೆ ಇದೇ ಸಕಾಲ. ಶುದ್ಧವಾದ ಸಾಮಾನು ಹಾಕಿ ಒಳ್ಳೆಯ ಅಡಿಗೆಮಾಡಿಸಿದರೆ ಗಿರಾಕಿ ಯಿಲ್ಲವೇನಯ್ಯ? ನಾನು ಎರಡು ಮೂರು ಕಲಾಪಗಳನ್ನು ಇಟ್ಟಿದ್ದೇನೆ. ಒಂದರಲ್ಲಿ ನಷ್ಟವಾದರೆ, ಇನ್ನೊಂದರಲ್ಲಾದರೂ ಹಣ ಬರುತ್ತೆ. ನೀನು ನವನಾಗರಿಕ. ನಾನು ಹೋಟ್ಲು ಇಟ್ಟಿರೋನು. ಊದುಕಡ್ಡಿ ಮಾರೋನು. ನನ್ನೊಡನೆ ನೀನು ಹೀಗೆ ಮಾತನಾಡುತ್ತೀಯಲ್ಲ. ಅದಕ್ಕಾಗಿ ನಾನು ಕೃತಜ್ಞ. ನಿನ್ನ ಸ್ವಭಾವ ನಾನು ಬಲ್ಲೆ.

**ನಾರಾಯಣಶಾಸ್ತ್ರಿ.**—ಏನಯ್ಯ, ನನ್ನ ಮೇಲೂ ಗುಂಡಿನ ಮಳೆ ಸುರಿಸುತ್ತೀ. ಕಾರ್ಲೈಲ್ ಮುಂತಾದವರ ಗ್ರಂಥಕ್ಕೆ ಮಣ್ಣು ಹಾಕಿದ ಮೇಲಾದರೂ, ಕೆಲಸದ ಘನತೆ—ಆ dignity of labour–ಅರಿತುಕೋ ಬೇಡವೇನಯ್ಯ? ಯಾವ ಕೆಲಸವಾದರೇನಂತೆ? ಕೆಲಸ ಮಾಡಿದರೆ ಅವ ಮಾನವೇ?

**ರಾಮಚಂದ್ರ.**—ನೀನೊಬ್ಬ ಹಳೇ ಗೊಡ್ಡು. "ಎಲ್ಲರೂ ಸಮ" ಅಂತ ಉಪನ್ಯಾಸ ಹೇಳ್ತಾರೆ ನೋಡು, ಅವರಲ್ಲಿ ಬಹಳ ಜನ ತಮಗಿಂತ ವರಮಾನ ಕಡಿಮೆಯಾಗಿರೋರನ್ನ ಬೀದಿಯಲ್ಲಿ ಕಂಡರೆ "ಎಲ್ಲರೂ ಸಮ" ಅನ್ನೋದು ಎಲ್ಲೋ ಹಾರಿಯೇ ಹೋಗುತ್ತೆ. ನಾನು ಹೋಟ್ಲು ಇಟ್ಟಿರೋನು ಅಂತ ಎಷ್ಟು ಜನ ಹಾಸ್ಯ ಮಾಡ್ತಾರೋ? ಆದರೆ ಹಣ ವೇನೋ ಬೇಕಾದ ಹಾಗೆ ಬರ್ತಾ ಇದೆ.

**ನಾರಾಯಣಶಾಸ್ತ್ರಿ.**—ಹೋಗಯ್ಯ, ಹಾಸ್ಯ ಮಾಡ್ತಾರಂತೆ ಇವನ್ನ! ಅಂಥ ಸುಪ್ಪತ್ತಿಗೆ ಸುಕುಮಾರರೂ, ಜಂಭದ ಕೋಳಿಗಳೂ, ಕಡಿಯೋದು ಯಾರೂ ಕಾಣರೇನೊ? ಇತರರು ಮುವ್ವತ್ತು ವರ್ಷಗಳಲ್ಲಿ ಸಾಧಿಸಲಾಗದ್ದನ್ನು, ಈ ಊರಿಗೆ ಬಂದ ಮೂರು ವರ್ಷಗಳಲ್ಲಿ ಸಾಧಿಸಿ ಜಯಭೇರಿ ಹೊಡೆದಿದ್ದೀಯೆ.

**ರಾಮಚಂದ್ರ.**—ಶಾಸ್ತ್ರಿ, ನೀನು ಹೊಗಳ ಭಟ್ಟನಾಗಬೇಡ. ನಾನು ಬೀದಿಯಲ್ಲಿ ಬೆಳೆದ ಭಿಕಾರಿ. ನನಗೆ ಅದು ಮರೆಯದಂತಿದ್ದರೆ ಸಾಕು. ನನ್ನ ಜೀವನವು ದೇಶಸೇವೆಗೆ ಮೀಸಲಾದರೆ ಸಾಕು.

**ಆಳು.**—(ಪ್ರವೇಶಿಸಿ ಒಂದು ಕಾಗದವನ್ನು ಕೊಟ್ಟು) ಸೇಟ್‌ಜೀ! ಆಪ್ ಬಾಬೂಲ್‌ನಾಥ್ ಜೀ ಕಾ ಪಾಸ್ ಆಯೆ. ಬಾದ್ ಏ ಖತ್ ಆಕೊ ಹೈ.

**ರಾಮಚಂದ್ರ.**—ಅಚ್ಛಾ! ತುಮೇ ಜಾವೊ. ಮೈ ಆಟ್ ಬಜೇ ಸೇ ಆಯೇಗ. (ಆಳು ಹೋಗುವನು.)

**ನಾರಾಯಣಶಾಸ್ತ್ರಿ.**—ಇದೇನು ಪೈಶಾಚಿಕ ಭಾಷೆಯಪ್ಪ ಇದು! ನಾನು ಈ ಊರಿಗೆ ಬಂದು ಎರಡು ತಿಂಗಳಾಗ್ತಾ ಬಂತು. ಇದು ಬೇರೆ ಅರ್ಥವಾಗೋದಿಲ್ಲ. ನನಗೆ ಇಂಗ್ಲಿಷ್ ಬಂದಿರೋ ಹೊತ್ತಿಗೆ ಬದುಕಿದೆ. ಇಲ್ಲದೆ ಹೋಗಿದ್ದರೆ, ದೇವರೇ ಗತಿ. ಏನು ಅವನು ಹೇಳಿದ್ದು?

**ರಾಮಚಂದ್ರ.**—ನೀವು ಇಲ್ಲಿಗೆ ಬಂದ ಮೇಲೆ ಈ ಕಾಗದ ಬಂತು ಅಂತ ಹೇಳಿದ.

**ನಾರಾಯಣಶಾಸ್ತ್ರಿ.**—ಒಳ್ಳೆ ಠೀಕ್ ಠಾಕಾಗಿ ಶಿಸ್ತಿನಮೇಲೆ ಇಟ್ಟಿದ್ದೀಯಯ್ಯ! ಕಾಗದ ಬಂದರೆ, ಮೇಜಿನ ಮೇಲೆ ಬಡಿದು ಬಾಗಿಲು ಹಾಕಿಕೊಂಡು ಹೋಗದೆ, ಇಲ್ಲಿಗೇ ತಂದಿದ್ದಾನೆ.

**ರಾಮಚಂದ್ರ.**—ಕರುಣದಿಂದ ಕೆಲಸಮಾಡಿಸೋಕೂ, ಭಯದಿಂದ ದುಡಿಸೋಕೂ ಇದೇ ವ್ಯತ್ಯಾಸ. ಕೆಲವರು ತಮ್ಮ ಕೈಕೆಳಗಿರೋರ ಮೇಲೆ ಮಾಡೋ ಜಬರಜಸ್ತು ಕಂಡು, ನಾನು ಎಷ್ಟು ಸಂಕಟಪಟ್ಟಿದ್ದೇನೋ ದೇವರಿಗೇ ಗೊತ್ತು. ಶಾಕುಂತಲ ನಾಟಕದ ವಿದೂಷಕ, ರಾಜನಿಂದ ಅಧಿಕಾರ ಪಡೆದು ಊರಿಗೆ ಹೊರಟಾಗ "ಹತ್ತುತ್ತ ಕುದುರೆ ಕತ್ತನ್ನೆ ತಿರುವಿ ಬೆತ್ತದಿಂದೆಲ್ಲರಂ ಮೊತ್ತುವೇನು" ಅಂತ ಹಾಡಿದ. ಅವನೇನೋ ಹಾಸ್ಯಕ್ಕೆ ರಂಗಸ್ಥಳದಲ್ಲಿ ಹಾಗೆ ಹೇಳಿದ. ನಿಜವಾಗಿ ಜೀವನದಲ್ಲಿಯೇ ಹಾಗೆ ಮಾಡೋರು ಎಷ್ಟೋಜನ ಇದ್ದಾರೆ. (ಕಾಗದವನ್ನು ಒಡೆಯುತ್ತ) ನನಗೆ ಅಂಥ ದುರ್ಬುದ್ಧಿಯು ಎಂದೆಂದಿಗೂ ಬರಬೇಡ. (ಕಾಗದವನ್ನು ಓದಿಕೊಳ್ಳುತ್ತ, ಮೊದಲು ಸಂತೋಷವನ್ನು ಸೂಚಿಸುವನು. ಆ ಬಳಿಕ ಸಂತಾಪವನ್ನು

**ಸೂಚಿಸಿ ದಿಗ್ಭ್ರಮೆ ಹಿಡಿದವನಂತೆ ನಿಂತುಕೊಳ್ಳುವನು. ಕೊನೆಗೆ ಆಕಾಶದ ಕಡೆಗೆ ನೋಡುತ್ತ, ಚಿಂತಾಕ್ರಾಂತವಾದ ಮುಖಮುದ್ರೆಯಿಂದ ಕೂಡಿ, ಶೋಕರಸದಿಂದ ತುಂಬಿರುವ ಧಾಟಿಯಲ್ಲಿ ಸಿಳ್ಳುಹಾಕುತ್ತ ನಿಲ್ಲುವನು.)**

**ನಾರಾಯಣಶಾಸ್ತ್ರಿ.**—ಏಕಯ್ಯ, ಹೀಗೆ ನಿಂತೆ? ಕಾಗದವನ್ನು ಓದೋವಾಗ ಸಂತೋಷಕ್ಕೆ ಮೂಗೇ ಅರಳಿಹೋಗಿತ್ತು. ಕೊನೆಗೆ ಪೆಚ್ಚು ಮುಖ ಹಾಕಿಕೊಂಡು ಕಲ್ಲುಬೊಂಬೆ ಹಾಗೆ ಹೀಗೆ ನಿಂತಿದ್ದೀಯೆ? ಎಲ್ಲಿ, ಕಾಗದ ತಾ, ನೋಡೋಣ. **(ಕಾಗದವನ್ನು ಕಿತ್ತುಕೊಂಡು ಓದುವನು.)**

"ಚಿ॥ ರಾಜಶ್ರೀ ಸಹಸ್ರಾಯುವಾದ ನಮ್ಮ ರಾಮುವಿಗೆ ಅನೇಕಾನೇಕ ಆಶೀರ್ವಾದಗಳು. ಅದಾಗಿ ಈ ವರೆಗೆ ಉಭಯ ಕುಶಲೋಪರಿ ಸಂಪ್ರತಿ. ನಿನ್ನ ಕಾಗದವೂ, ನೀನು ರಿಜಸ್ಟರು ಮಾಡಿಸಿ ಕಳುಹಿಸಿದ ಐನೂರು ರೂಪಾಯಿ ನೋಟುಗಳೂ, ತಲುಪಿದುವು. ನಿನ್ನ ಕಾಗದವನ್ನು ಓದಿ ಕಣ್ಣಿನಲ್ಲಿ ನೀರು ಹರಿದು ಹೋಯಿತು. ನೀನು ಎಲ್ಲಿ ಹೋಗಿ ಬಿಟ್ಟೆಯೋ, ಏನಾದೆಯೋ ಎಂಬ ಯೋಚನೆಯಿಂದ ಮೂರು ವರುಷ ಕಾಲದ ತಳಮಳಕ್ಕಿಂತ, ನಿನ್ನ ಕರುಣರಸಮಿಶ್ರಿತವಾಗಿ ಪ್ರೀತಿ ಭಕ್ತಿಗಳಿಂದ ತುಂಬಿ ತುಳುಕುತ್ತಿದ್ದ ಮಾತುಗಳಿಂದ ಉಂಟಾದ ಆನಂದದ ತಳಮಳವು ಇನ್ನೂ ಹೆಚ್ಚಿನದಾಯಿತು. ನೀನು ಹೊರಟುಹೋದುದಕ್ಕಾಗಿ ಕೂಡ ಕಣ್ಣಿನಲ್ಲಿ ನೀರು ಹಾಕಿರಲಿಲ್ಲ. ಕಾಗದವನ್ನು ಐದನೆಯ ಸಲ ಓದಿದಾಗಲೂ ಸಹ ಕಣ್ಣಿನಲ್ಲಿ ಕಂಬನಿಯ ಕೋಡಿ. ಮುಖ್ಯ ನಮ್ಮ ಗೋಪು ಇರಬೇಕಾಗಿತ್ತು. ನಿಮ್ಮ ತಾಯಿ ಬದುಕಿರಬೇಕಾಗಿತ್ತು. ನೀನು ಊರಿನಿಂದ ಹೇಳದೆ ಕೇಳದೆ ಹೊರಟುಹೋದುದಕ್ಕಾಗಿ ನಾನು ಕಳವಳಪಟ್ಟು ಪೇಚಾಡಿದೆನೇ ಹೊರತು, ನೀನು ಬರೆದಿರುವಂತೆ ಖಂಡಿತವಾಗಿಯೂ ಶಪಿಸಲಿಲ್ಲಪ್ಪ. ಅಂಥ ಪಾಪಕ್ಕೆ ಹೋಗಲೇ ಮಗು? ಅದೂ ಇಷ್ಟು ದಿನ ಬದುಕಿ ಬಾಳಿದ ಮೇಲೆ ಹಾಗೆ ಮಾಡಲೇ? ನೀನು ಹಣವನ್ನು ಸದುದ್ದೇಶದಿಂದ ತೆಗೆದುಕೊಂಡು ಹೋಗಿ ಒಳ್ಳೆಯ ದಾರಿಯಲ್ಲಿ ವಿನಿಯೋಗಿಸಿದೆ. ಹೊರಗಿನವರ ಒಡವೆಯನ್ನು ಹಾರಿಸಿದರೆ ಕದ್ದಹಾಗಾಯಿತು. ನಮ್ಮ ಗೋಪು

ಮಗ, ನಮ್ಮ ರಾಮು, ತನ್ನ ಕೈಲಿ ನಾನೇ ಕೊಟ್ಟಿದ್ದ ತನ್ನ ಸ್ವಂತ ಹಣವನ್ನು ತೆಗೆದುಕೊಂಡರೆ, ಅದನ್ನು ಕದ್ದಹಾಗಾಯಿ ತೆಂದರೆ ಅರ್ಥವೇನು? ಮುನ್ನೂರು ರೂಪಾಯಿಗೆ ನಿನ್ನಿಂದ ನಾನು ಇನ್ನೂರು ರೂಪಾಯಿ ಬಡ್ಡಿ ತೆಗೆದುಕೊಳ್ಳಬೇಕೆಂಬುದನ್ನು ಕೇಳಿ ಸಂಕಟವಾಯಿತು. ಆದರೆ, ನೀನು ಅದರ ಸಂಬಂಧದಲ್ಲಿ ಅದು ಸಾಧುವೆಂದು ತೋರುವ ಹಾಗೇ ಬರೆದಿದ್ದೀ. ನಮ್ಮ ಚಿ॥ ಸೌ॥ ಲಲಿತುವಂತೂ, ನಿನ್ನ ಕ್ಷೇಮಲಾಭವನ್ನು ತಿಳಿದು ಕುಣಿಯುತ್ತಿ ದ್ದಾಳೆ. ಈ ಹಣವು ನಿನಗೇ ಸೇರಿದ್ದು. ನಿಮ್ಮ ತಂದೆ ಗೋಪು ಅದನ್ನ ನನ್ನ ಕೈಲಿ ಕೊಟ್ಟಿದ್ದ. ನಾನು ಅದನ್ನ ಬಡ್ಡಿಗೆ ಹಾಕಿದ್ದೆ. ನಿನಗೆ ಹಿಂದಿನ ಕಥೆಯೆಲ್ಲಾ ಗೊತ್ತಿರಬೇಕೆಂದು ನಾನು ಹೇಳದೆ ಸುಮ್ಮನಿದ್ದೆ. ದೇವಸ್ಥಾನದ ಕಾಮಗಾರಿಗೆಂದು ಗೋಪು ಅದನ್ನ ಕೊಟ್ಟಿದ್ದ. ಅಷ್ಟರಲ್ಲಿ ನಮ್ಮ ರೈತ ತನಗೆ ಕಷ್ಟದ ಸಮಯವೆಂದು ಬಂದ. ಸಾಲಕೊಟ್ಟೆ. ಮುಂದೆ ಮಳೆಗಾಲ ಕಳೆದ ಮೇಲೆ ನಾನೇ ಸ್ವಂತ ಹಣದಿಂದ ಕಾಮಗಾರಿ ಮಾಡಿಸಿಬಿಟ್ಟೆ. ಗೋಪು ಹಣ, ಬಡ್ಡಿ ಸಹಿತ ಹಿಂದಕ್ಕೆ ಬಂದ ಮೇಲೆ ನಿನಗೆ ಕೊಡಬೇಕೆಂತ ನಿಷ್ಕರ್ಷೆ ಮಾಡಿಕೊಂಡೇ ಇದ್ದೆ. ನೀನು ಒಪ್ಪುವುದಾದರೆ, ಈಗ ನನ್ನಲ್ಲಿಗೆ ಬಂದಿರುವ ಹಣವನ್ನು ನೀನು ಧನಿಕನಾಗುತ್ತಿರುವ ಸಂತೋಷ ಕ್ಕಾಗಿ ದರಿದ್ರನಾರಾಯಣನ ಸೇವೆಗೆ ಸಮರ್ಪಿಸುತ್ತೇನೆ. ಆದರೆ ನಿನ್ನ ಸ್ಥಿತಿಯು ಹೇಗಿದೆಯೋ ಕಾಣೆ. ಬೇಕಾದರೆ ಹಣವನ್ನು ಹಿಂದಕ್ಕೆ ಕಳುಹಿಸುತ್ತೇನೆ. ನಮ್ಮ ಚಿ॥ ಸೌ॥ ಲಲಿತುವಿಗೆ ಸರಿ ಯಾದ ವರನೇ ಸಿಕ್ಕದೆ ವಿವಾಹ ಮಾಡಿರಲಿಲ್ಲ. ಅವಳ ವಿವಾಹವು ಗೊತ್ತಾಗಿದೆ. ಅದರ ವಿಷಯವನ್ನೆಲ್ಲಾ ನಾಳೆ ಬರೆಯುತ್ತೇನೆ. ನೀನು ಇಲ್ಲಿಗೆ ಬರಲು ಅನುಕೂಲ ಮಾಡಿಕೊಳ್ಳಬೇಕೆಂದು ಈಗಲೇ ಅದನ್ನು ಸೂಕ್ಷ್ಮವಾಗಿ ತಿಳಿಸಿದ್ದೇನೆ. ಸೌಭಾಗ್ಯವತಿಗಂತೂ, ನಿನ್ನ ಅಭಿವೃದ್ಧಿಯ ವಿಚಾರವನ್ನು ಕೇಳಿ ಬಹಳ ಸಂತೋಷವಾಗಿದೆ. ಮತ್ತೆ ನಾಳೆಯೇ ಬರೆಯುತ್ತೇನೆ. ಇತ್ಯಾಶಿಷಃ. ರಾಮಾ ಜೋಯಿಸ.''

**ನಾರಾಯಣಶಾಸ್ತ್ರಿ.**—(ಕಾಗದವನ್ನೋದಿ ಪೂರೈಸಿದ ಮೇಲೆ ಒಂದೆರಡು ನಿಮಿಷ ಸುಮ್ಮನಿದ್ದು) ಎಷ್ಟು ಗಟ್ಟಿಗನಯ್ಯ, ನೀನು. ಚಾವಟಿಯಿಲ್ಲದೆ ಬುಗುರಿ ಆಡಿಸುವ ಮನುಷ್ಯ. ನಿನ್ನ ಕಳವಳಕ್ಕೇನು ಕಾರಣ? ಜೋಯಿಸರು ಎಷ್ಟು ಪ್ರೀತಿಯನ್ನು ತೋರಿಸಿದ್ದಾರೆ! (ಸ್ವಲ್ಪ ಯೋಚಿಸಿ) ಓಹೋ, ಗೊತ್ತಾಯಿತಯ್ಯ. ನಾನೆಲ್ಲೋ ಶುದ್ಧ ಮಡೆಯ. ನನಗೆ ಇಷ್ಟು ತಿಳಿಯಬೇಡವೆ? ನೀನು ಅವರ ಮಗಳನ್ನು ಮದುವೆಯಾಗಬೇಕೆಂದಿದ್ದೆಯೇನಯ್ಯ? ಹಾಗಿದ್ದರೆ, ಅವರಿಗೆ ಅದನ್ನು ತಿಳಿಸಬೇಕಾಗಿತ್ತು. ಹಾಗೆ ಮಾಡದೆ ಹೋದದ್ದು ನಿನ್ನದೇ ತಪ್ಪು.

**ರಾಮಚಂದ್ರ.**—ಶಾಸ್ತ್ರಿ! ನನ್ನ ಬುದ್ಧಿಯೇ ಸ್ತಿಮಿತವಿಲ್ಲ. ನೀನು ನನ್ನ ಜೊತೇಲೇ ಇರಬೇಕು. ಮನೆಗೆ ಹೋಗೋಣ, ಬಾ. ಇಲ್ಲ, ಚೌಪಾತಿ ಹತ್ತಿರಕ್ಕೆ ಒಬ್ಬ ಬಡಪಾಯಿ ಬಂದಿರ್ತಾನೆ. ಅಲ್ಲಿಗೆ ಹೋಗಿ ಮನೆಗೆ ಹೋಗಬೇಕು. (ಒಂದೆರಡು ಕ್ಷಣ ಸುಮ್ಮನಿದ್ದು) "ಲೋಕಂ ಶೋಕಹತಂ ಚ ಸಮಸ್ತಮ್" ಅನ್ನೋದು ನಿಜವಯ್ಯ. ಏನು ಪ್ರಪಂಚವೋ?

(ನಿಟ್ಟುಸಿರು ಬಿಡುವನು.)

(ತೆರೆಯು ಬೀಳುವುದು.)

---

## ದೃಶ್ಯ ೨

[ರಂಗರಾಯನ ಕೊಟಡಿ. ಮೊದಲನೆಯ ಅಂಕದಲ್ಲಿ ಹೇಳಿರುವಂತೆಯೇ ಇರುವುದು. ರಂಗರಾಯನೂ, ಯಶೋದಮ್ಮನೂ, ಮೇಜಿನ ಬಳಿಯಲ್ಲಿ ಕುರ್ಚಿಗಳ ಮೇಲೆ ಕುಳಿತಿರುವರು.]

**ಯಶೋದಮ್ಮ.**—(ನಿಟ್ಟುಸಿರು ಬಿಟ್ಟು) "ಒಬ್ಬ ಮಗ ಮಗನಲ್ಲ ಒಂದು ಕಣ್ಣು ಕಣ್ಣಲ್ಲ." ಎಂಬ ಗಾದೆ ನಿಜ ನೋಡಿ. ಒಬ್ಬನೇ ಮಗನೆಂದು ಸಾಕಿ ಸಲಹಿ, ಎಷ್ಟೋ ಮುದ್ದಿನಿಂದ ನೋಡಿಕೊಂಡದ್ದಕ್ಕೆ ಕಿಟ್ಟು ನಮ್ಮ ಕೊರಳನ್ನೇ ಕೊಯ್ದ.

**ರಂಗರಾಯ.**—ಯಶೋದ! ನಿಷ್ಠುರವಾಗಿ ಮಾತನಾಡಿದೆನೆಂದು ಕೋಪಿಸಿಕೊಳ್ಳಬೇಡ. ಕಿಟ್ಟುವು ಹಾಗಾದ್ದಕ್ಕೆ ನಾವೇ ಹೊಣೆ. ನಾವು ನಮ್ಮ ದೇಶದ ಉತ್ತಮವಾದ ಪದ್ಧತಿಗಳನ್ನೂ ತೆಗೆದುಕೊಳ್ಳಲಿಲ್ಲ.

ಪಾಶ್ಚಾತ್ಯರ ಉತ್ತಮವಾದ ಪದ್ಧತಿಗಳನ್ನೂ ಅನುಸರಿಸಲಿಲ್ಲ. ಎರಡರ ಕೆಟ್ಟ ಸಂಪ್ರದಾಯಗಳನ್ನೂ ತೆಗೆದುಕೊಂಡು ಅವನನ್ನು ಹಾಳು ಮಾಡಿದೆವು. ನೀನಂತೂ, ಅವನು ಏನೋ ಆಗಿಬಿಡ್ತಾನೆ ಅಂತ ಹಾರಾಡುತ್ತಿದ್ದೆ.

**ಯಶೋದಮ್ಮ.**—ನನಗಂತೂ, ಕೆಟ್ಟಮೇಲೆ ಬುದ್ಧಿ ಬಂತು ನೋಡಿ. ರಾಮಚಂದ್ರನ್ ಅವತ್ತೇ ಹೇಳಿದ. ಅದು ನಿಜ. ಕಿಟ್ಟೂ, ತಾನೂ, ಆದರೆ ಪಿಶಾಚಗಳಾಗಬೇಕು ಅಂತ. ಕಿಟ್ಟು ವಿಷಯದಲ್ಲಿ ಅದೇ ನಿಜವಾಯಿತು. ಇಲ್ಲ, ಇಲ್ಲ, ಇನ್ನೂ ಕಡೆಯಾಯಿತು. ಏಕೆಂದರೆ, ಪಿಶಾಚಗಳು ಕೂಡ, ಜೀವಿತಕಾಲದಲ್ಲಿ ತಮಗೆ ಪ್ರೀತಿಪಾತ್ರರಾದವರ ಮೇಲೆ ಕೈಮಾಡುವುದಿಲ್ಲ. ಇವನು ನಮ್ಮ ಮೇಲೇ ಆಯುಧಪ್ರಯೋಗಮಾಡಿದ. ಆದ್ದರಿಂದ ಅವನು ಪಿಶಾಚಿಗೂ ಕಡೆಯಾದಂತೆಯೇ ಆಯಿತು. ವಿಲಕ್ಷಣವಾದ opinions ಇಟ್ಟುಕೊಂಡು ನಾನೂ ಜೀರುದುಂಬಿಗೆ ಹುಚ್ಚುಹಿಡಿದ ಹಾಗೆ ಆಡಿದೆ. ಪಾಪ, ರಾಮಚಂದ್ರನ್ ನಮ್ಮಿಂದ ಎಷ್ಟು ಕಷ್ಟಕ್ಕೆ ಗುರಿಯಾದ! ನನಗೆ ಈಗಿನ ಬುದ್ಧಿ ಆಗೇತಕ್ಕೆ ಇರಲಿಲ್ಲವೋ ತಿಳಿಯದು.

**ರಂಗರಾಯ.**—ಆದರೆ ಸೀಮೆಗೆ ಹೋದ ಮಾತ್ರವೇ ಹೀಗಾಗಬೇಕೆ? ನಮ್ಮ ದೇಶದವರು ಎಷ್ಟು ಮಂದಿ ಸೀಮೆಗೆ ಹೋಗಿಬಂದಿಲ್ಲ? ಅವರಲ್ಲಿ ಅನೇಕರು ತುಂಬಿದ ಕೊಡದಂತಿಲ್ಲವೆ? ಇವನಿಗೇನು ತಲೆಯಮೇಲೆ ಕೊಂಬಿರೋದು? ಮದುವೆಯಾಗುವುದಕ್ಕೆ ಮುಂಚೆ ಗಂಡು ಹುಡುಗರನ್ನು ಸೀಮೆಗೆ ಕಳುಹಿಸುವುದು ಶುದ್ಧ ತಪ್ಪು.

**ಯಶೋದಮ್ಮ.**—ಕಳುಹಿಸಿದ ಮಾತ್ರಕ್ಕೇ ಅಲ್ಲಿಯ ಹುಡುಗಿಯನ್ನು ಮದುವೆಮಾಡಿಕೊಳ್ಳಬೇಕೆ? ಸೀಮೆಗೆ ಹೋಗಿಬಂದವರೆಲ್ಲಾ ಹೀಗೇ ಮಾಡಿದ್ದಾರೆಯೇ?

**ರಂಗರಾಯ.**—ನೀನು ಆ ಮಾತು ಕೇಳಿದ್ದಕ್ಕೆ ಅವನು ಅವತ್ತೇ ಉತ್ತರ ಹೇಳಿದ್ದಾನಲ್ಲ. "ನೀನು progressive ideas ಇಟ್ಟುಕೊಂಡು ಹಳೇ ಸಂಪ್ರದಾಯದವರಿಗಿಂತ ಎಷ್ಟೋ ಮುಂದೆ ಹೋದೆ. ನೀನು ಸಾಕಿದ್ದರಿಂದ ನಾನು ಇನ್ನೂ ಮುಂದೆ ಹೋದೆ" ಅಂತ.

**ಯಶೋದಮ್ಮ.**—ಅಯ್ಯೋ ಅದನ್ನ ಜ್ಞಾಪಿಸಬೇಡಿ, ಸುಮ್ಮನಿರಿ. ನನಗೆ ಮೈ ಉರಿದುಹೋಗುತ್ತೆ. ಮುಖ್ಯವಾಗಿ ನನ್ನ ಬುದ್ಧಿ ಮೋಸ ಹೋಯಿತು. ನಾನು ಸರಿಯಾದ ದಾರಿ ಹಿಡಿಯಬೇಕಾಗಿತ್ತು. ಸರಿ ಯಾಗಿ ಅವನನ್ನ ಸಾಕಬೇಕಾಗಿತ್ತು. ಸೀಮೆಗೆ ಕಳುಹಿಸದೆ ಸುಮ್ಮನಿರ ಬೇಕಾಗಿತ್ತು. ರತಿದೇವಿ ಅಂಥ ಹುಡುಗಿ, ಆ ರಾಮಾಜೋಯಿಸರ ಮಗಳು ಲಲಿತ, ಅವಳನ್ನ ತಂದು ಮದುವೆಮಾಡಬೇಕಾಗಿತ್ತು. ಸೀಮೆಗೆ ಕಳುಹಿಸೋದು ಬೇಡ ಅಂತ ನೀವು ಹೇಳಿದಿರಿ. ಮಗ ಅಲ್ಲಿಂದ ಬಂದು ಕನಕಾಭಿಷೇಕ ಮಾಡ್ತಾನೆ, ಮನೆ ಮೇಲೆ ಚಿನ್ನದ ಕಲಶ ಹಾಕ್ತಾನೆ ಅಂತ ನಾನು ತಿಳಿದುಕೊಂಡು ಹಠ ಹಿಡಿದೆ.

**ರಂಗರಾಯ.**—ದುರದೃಷ್ಟಕ್ಕೆ ಯಾರು ಹೊಣೆ? ತನ್ನ ಹೆಂಡತಿ ಮುಂದೆ—ಆ ರಂಭೆಗೆ ತೃಪ್ತಿಯಾಗುವುದಕ್ಕಾಗಿ—ನಮ್ಮಿಬ್ಬರನ್ನೂ ತನ್ನ dependents ಅಂತ ಹೇಳಿಕೊಂಡನಲ್ಲಾ! ಅದು ನನ್ನ ಮನಸ್ಸನ್ನ ಕೀಟ ದಂತೆ ಕೊರೀತಾ ಇದೆ. ಯಾರೋ ಒಬ್ಬರು ಮಹಾನುಭಾವರು ತಂದೇನ ತಂದೆ ಅಂತ ಹೇಳಿದರೆ ಅವಮಾನವೆಂತ ಭಾವಿಸಿ ತಮ್ಮ ಮನೆಯ ದೇವರ ಪೂಜೆ ಬ್ರಾಹ್ಮಣ ಅಂತ ತಮ್ಮ ಜೊತೆಯ ದೊಡ್ಡ ಹುದ್ದೇದಾರರಿಗೆ ಹೇಳಿ ದ್ದರೂ ಅಂತ ಕೇಳಿದ್ದೆ. ಈಗ ಅದನ್ನ ನಾನೇ ಅನುಭವಿಸಿದೆ. ನೀನು ಟೀ ಪಾರ್ಟಿ ಮಾಡಿದ ದಿನದಿಂದ ಎಲ್ಲಿ ತಲೆ ಇಟ್ಟರೂ, ಕನ್ನಡ ಕೂಡ ಬರದೋನು, ಅಂಥೋನು ಇಂಥೋನು ಅಂತ ಜನ ಹಾಸ್ಯ ಮಾಡೋರು. ಮಗನೂ, ಸೊಸೆಯೂ ಬಂದ ಮೇಲಂತೂ, ನನ್ನ ಮಾನ ಪೂರ್ತಿಯಾಗಿ ಹೋಯಿತು.

**ಯಶೋದಮ್ಮ.**—ಈಗ ನಾನು ನಿಮಗೆ ಹೊಸ ಹೆಂಡತಿಯೇ ಆಗಿದ್ದೇನಲ್ಲ. ಹಿಂದಿನದನ್ನೆಲ್ಲಾ ಮರೆತುಬಿಡಿ. ನಾನು ಲಂಗಹಾಕಿಕೊಂಡು ನೀವು ಹ್ಯಾಟಿಟ್ಟುಕೊಂಡು ಬಾಗಿಲಲ್ಲಿ ನಿಂತು Welcome Song ಹಾಡಿ ದ್ದರೆ, ನಾವಿಬ್ಬರೂ ತನ್ನ ತಾಯಿತಂದೆಗಳಂತ ಆ ರಂಭೆಗೆ ಹೇಳ್ತಾ ಇದ್ದ ನೇನೋ. ಆ ಕೋತೀನ ಸೊಸೆ ಅಂತೀರಿ, ನೀವೂ ಸರಿಯೆ. ನನಗೇನೋ ಮೈ ಚಿಟುಗುಟ್ಟಿ ಹೋಗ್ತಾ ಇದೆ.

**ರಂಗರಾಯ.**—ನನಗೇನು ಯೋಚನೆ ಹತ್ತಿದೆ ಅಂದರೆ, ಆಸ್ತಿ ಯೆಲ್ಲಾ ಕಡಿಮೆಯಾಗ್ತಾಬಂತು. ಸೀಮೇಲಿ ಹಣವೆಲ್ಲಾ ಧೂಳೆಬ್ಬಿಸಿ ದ್ದಾಯ್ತು. ಈಗ ಆಸ್ತಿಯನ್ನೂ ಭಾಗ ಕೇಳ್ತಾನೋ ಏನೋ! ಇಲ್ಲದೆ ಹೋದರೂ ದುಡ್ಡಂತೂ ಎಳೆದೇ ಎಳೀತಾನೆ. ದಂಡಿನ ಹೋಟಲಿನಲ್ಲಿ ಈ ದಂಪತಿಗಳು ಇರೋದು ಅಂದರೆ ಸುಮ್ಮನೆಯೆ? ಅವನ ಸಂಬಳ ಅದಕ್ಕೆ ಸಾಕೆ? ಆಸ್ತಿ ಕಡಿಮೆಯಾಗ್ತಾ ಇರೋದಕ್ಕೇ ಅಳಬೇಕೆ? ಸಾಲಾ ಹೆಚ್ತಾ ಇರೋದಕ್ಕೇ ಅಳಬೇಕೆ? ಹೋದ ಸಲ ಎಲೆಕ್ಷನ್ನಿನಲ್ಲಿ ಸೋತ ಅವಮಾನಕ್ಕೇ ಅಳಬೇಕೆ? ಈ ಸಲ ಎಲೆಕ್ಷನ್ನಿಗೆ ನಿಂತರೆ ಬರದೇ ಇರೋಹಾಗಿರೋದಕ್ಕೇ ಅಳಬೇಕೆ? ಈ ಮಗನೂ, ಸೊಸೆಯೂ ನಮ್ಮನ್ನು ಕಾಸಿಗೆ ಕಡೆಯಾಗಿ ಕಾಣ್ತಾ ಇರೋದಕ್ಕೇ ಅಳಬೇಕೆ? ಯಾವ್ಯಾವದಕ್ಕೇ ಅಂತ ಅಳೋಣ ಹೇಳು.

**ಅಬ್ದುಲ್ ಲತೀಫ್.**—(ಪ್ರವೇಶಿಸಿ) ಚಿಕ್ಕ ಅಮ್ಮಾವರು ಬಂದಿತ್ತು. ನಾನು ಹೇಳ್ದೆ. ನೀವು ಹೇಳಿದ್ದೂ ನಾನು ಹೇಳ್ದೆ. ನೀವು ಮನೇದೊಳ್ಗೇ ಇಲ್ಲ ಅಂತ.

**ಯಶೋದಮ್ಮ.**—ಚಿಕ್ಕ ಅಮ್ಮಾವರಂತೆ, ಚಿಕ್ಕ ಅಮ್ಮಾವರು. ಚಿಕ್ಕ ಅಮ್ಮಾವರು ಯಾರೋ?

**ಅಬ್ದುಲ್ ಲತೀಫ್.**—ನಮ್ಮ ಕಿಷನ್ ಮೂರ್ತಿ, ನಮ್ಮ ಚಿಕ್ಕ ಯಜಮಾನ್ ಐತಲ್ಲಾ. ಅವರು ವಿಲಾಯತ್ನಿಂದ ತಂದಿರೋ ಲಡಕಿ.

**ಯಶೋದಮ್ಮ.**—ಅವಳೇ, ಸರಿ! ಇನ್ನುಮೇಲೆ ಅವಳನ್ನ ಚಿಕ್ಕ ಅಮ್ಮನವರು ಅನ್ನಬೇಡ. ಭೂತ, ಭೂತ, ಅನ್ನು.

**ರಂಗರಾಯ.**—ಅದಿರಲಿ. ನಾವು ಬೆಳಗ್ಗೆ ಅಂಗಡೀಕಡೆ ಹೋದಾಗ "ಯಾರಾದರೂ ಬಂದರೆ ಇಲ್ಲಾ ಅಂತ ಹೇಳೋ" ಅಂದಿದ್ದೆ. ಈಗಲೂ ಹಾಗೇ ಹೇಳೋದೆ.

**ಅಬ್ದುಲ್ ಲತೀಫ್.**—ಮಾಫ್ ಮಾಡಿ, ಖಾವಿಂದ್! ನಾನು ಇವತ್ತೆಲ್ಲಾ ಯಾರು ಬಂದ್ರೂ ಹಂಗೇ ಹೇಳಬೇಕೇನೋ ಅಂತಿದ್ದೆ. ಕುದ್ರೇ ಗಾಡೀಲಿ ಬಂದಿದ್ದು ಹೊರಟುಹೋದ್ರು. ದೂರದಲ್ಲಿ ರಾಮಾಜೋಯಿ ಸರು ಬರ್ತಿದ್ರು. ಬಿಡಲಿ ಒಳಕ್ಕೆ?

**ರಂಗರಾಯ.**—ಅವರಿಗೆ ಬರಬೇಕು ಅಂತ ಹೇಳು. ಹೋಗು.
(ಲತೀಫ್ ಹೋಗುವನು.)

**ಯಶೋದಮ್ಮ.**—ಬಿಟ್ಟಿ ದುಡ್ಡು ಬಂದರೆ, ಗಾಡೀನೂ ಬರುತ್ತೆ, ಮೋಟಾರೂ ಬರುತ್ತೆ, ಏರೋಪ್ಲೇನ್ ಬೇಕಾದರೂ ಬರುತ್ತೆ. (ಹಲ್ಲು ಕಡಿದು) ಪ್ರಾರಬ್ಧಗಳು !

**ರಂಗರಾಯ.**—ಹೀಗೇಕಾಡ್ತಿ? ನೋಡೋಣ, ಎಲ್ಲಾ ಎಲ್ಲಿಗೆ ಬರುತ್ತೆ ಅಂತ.

**ಯಶೋದಮ್ಮ.**—ನಿಮ್ಮಷ್ಟು patience ನನಗಿಲ್ಲಾ ಅಂದರೆ.

**ಅಬ್ದುಲ್ ಲತೀಫ್.**—(ಪ್ರವೇಶಿಸಿ) ಮಾಫ್ ಕರ್ನ. ಚಿಕ್ಕ ಅಮ್ಮಾವರು ಅಲ್ಲ, ಅಲ್ಲ, ಭೂತಮ್ಮಾವರು ಕಾರಡ್‌ಕೊಟ್ಟು ಹೋದ್ರು, ಅದು ಕೊಡೋದು ಮರೆತೇಬಿಟ್ಟೆ. (ರುಮಾಲಿಗೆ ಸಿಕ್ಕಿದ್ದ ವಿಜಿಟಿಂಗ್‌ಕಾರ್ಡು ತೆಗೆದು ಕೊಟ್ಟು) ಜೋಯಿಸ್ ಬಂದಿತ್ತು. ಹೇಳ್ದೆ. ಕಾಲ್ತೊಳಗೆ ತೊಳಾದು ಕೊಂಡು ಬರೋಕೆ ನಲ್ಲಿ ಹತ್ತಿರ ಹೋಗಿದ್ದಾದೆ; ಈಗ ಒಳಗೆ ಬರ್ತಾದೆ.
(ಹೋಗುವನು.)

**ರಂಗರಾಯ.**—ಕಾರ್ಡಿಗೆ guilt edge ನೋಡು, ಯಶೋದ.

**ಯಶೋದಮ್ಮ.**—ಗಿಲ್ಟ್ ಎಡ್ಜೋ, ಗಿಲ್ಟಿ ಎಡ್ಜೋ. ಎಲ್ಲಾದರೂ ಹಾಳಾಗಲಿ; ಹೋಗಿ ಅಂದರೆ. (ಎದ್ದು ಹೋಗುವಳು.)

**ರಾಮಾಜೋಯಿಸ.**—(ಪ್ರವೇಶಿಸಿ) ಎಷ್ಟು ದಿನದಿಂದಲೋ ಇಲ್ಲಿಗೆ ಬರಬೇಕು ಅಂತ ಪ್ರಯತ್ನ. ಆಗಲೇ ಇಲ್ಲ ನೋಡಿ.

**ರಂಗರಾಯ.**—ದಯಮಾಡಿ ಜೋಯಿಸರೆ. ಹೀಗೆ ಬನ್ನಿ. (ರಂಗರಾಯನು ತೋರಿಸಿದ ಕುರ್ಚಿಯ ಮೇಲೆ ರಾಮಾಜೋಯಿಸನು ಕುಳಿತುಕೊಳ್ಳುವನು.) ತಮ್ಮ ಸಮಾನವಿಲ್ಲ. ತಮ್ಮದು ಮಾದರಿ ಜೀವನ. ನಾನು ಒಂದು ಸಾರಿ ಕೇಳಿದ ಮಾತ್ರಕ್ಕೇ ಹಿಂದಿನದೆಲ್ಲಾ ಕ್ಷಮಿಸಿಬಿಟ್ಟಿರಿ. ನನಗೆ ಬಹಳ ದುಃಖ ಬಂದೊದಗಿತು, ಜೋಯಿಸರೆ! ಸರಿಯವರಲ್ಲಿ ನಾಚಿಕೆ ಕೇಡು. ನಗೋರ ಮುಂದೆ ಎಡವಿಬಿದ್ದಹಾಗೆ. ನನಗೂ ಈಚೆಗೆ ಬುದ್ಧಿ ಬಂದಿದೆ ಜೋಯಿಸರೆ. ನನ್ನ ಹಿಂದಿನ ಅವಿವೇಕವೆಲ್ಲಾ ಗೊತ್ತಾಗಿದೆ.

**ರಾಮಾಜೋಯಿಸ.**—ಏನೂ ಇಲ್ಲ. ಹಾಗೇಕೆ ಹಚ್ಚಿಕೊಳ್ಳುತ್ತೀರಿ. ನಾನೂ ವಿಷಯವೆಲ್ಲಾ ಕೇಳಿದೆ. ಇರಲಿ. ಬಂದದ್ದನ್ನು ಅನುಭವಿಸಿಯೇ ತೀರಬೇಕು. ತಾವು ದೂರವಾಗಿದ್ದರೆ ಸರಿ.

**ರಂಗರಾಯ.**—ಜೋಯಿಸರೆ, ನನಗಂತೂ ಮುಂದೆ ಶ್ರಾದ್ಧವು ಸರಿಯಾಗಿ ನಡೆಯೋದಿಲ್ಲ. ನಾನಾದರೂ ಇನ್ನುಮುಂದೆ ನಮ್ಮ ತಾಯಿ ತಂದೆಗಳ ಶ್ರಾದ್ಧವನ್ನು ಬಹಳ ಭಕ್ತಿಯಿಂದ ಬಹಳ ಚೆನ್ನಾಗಿ ಮಾಡಬೇಕೆಂದಿದ್ದೇನೆ.

**ರಾಮಾಜೋಯಿಸ.**—(ಸ್ವಗತ) ಅಯ್ಯೋ ಪ್ರಾಣಿ! ಏನು ಕಷ್ಟ ಬಂತು ನಿನಗೆ? (ಪ್ರಕಾಶ) ಹಾಗೆಲ್ಲಾ ಹೇಳಬೇಡಿ, ರಾಯರೆ. ನಾನು ತಮಗೊಂದು ವಿಷಯ ವಿಜ್ಞಾಪಿಸಬೇಕೆಂತ ಬಂದೆ. ನಮ್ಮ ರಾಮಚಂದ್ರಯ್ಯ ಇಲ್ಲಿಗೆ ಬಂದಿದ್ದಾನೆ.

**ರಂಗರಾಯ.**—ಭೇಷ್, ಭೇಷ್, ಮುತ್ತಿನಂಥ ಅಳಿಯ. ಏನು ದೇಶಭಕ್ತಿ, ಏನು ಕಥೆ. ಗ್ರಾಮದ ಉಳುಮೆಗೆಲ್ಲಾ ಸ್ವಂತ ವೆಚ್ಚದಿಂದ ಸೀಮೆನೇಗಿಲು ತರಿಸಿಕೊಟ್ಟಿದ್ದಾನಂತೆ. ಸರ್ಕಾರದವರ ಸಹಾಯವನ್ನೂ ಪಡೆದು, ತಾನೂ ಹಣವನ್ನು ಹಾಕಿ, ಹಳ್ಳಿಯನ್ನು ಮುಂದಕ್ಕೆ ತಂದಿದ್ದಾನಂತೆ. ಎಲ್ಲಿ ನೋಡಿದರೂ ಅವನ ಹೊಗಳಿಕೆಯೇ. ಯಾವ ಪೇಪರಿನಲ್ಲಿ ನೋಡಿದರೂ ಅವನ ಹೆಸರೇ. ಬೊಂಬಾಯಿನಿಂದ ಪದೇ ಪದೇ ಬರುತ್ತಲೇ ಇರುತ್ತಾನಂತಲ್ಲ. ನಮಗಿದ್ದ ಮನಸ್ತಾಪದಿಂದ ಮದುವೆಗೂ ಬರಲಿಲ್ಲ. ಅವನನ್ನು ನೋಡಬೇಕು.

**ರಾಮಾಜೋಯಿಸ.**—ಏನೋ ತಮ್ಮ ಸಂತೋಷ. ತಮ್ಮ ಆಶೀರ್ವಾದ. ಅವನು ಇಲ್ಲಿ ಇಲ್ಲದೆ ಇರುವಾಗ ನಾನು ಗ್ರಾಮದ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತೇನೆ. ನಾನೂ ಇಷ್ಟರಲ್ಲೇ ಹಳ್ಳಿಗೇ ಹೊರಟು ಅಲ್ಲೇ ಇದ್ದುಬಿಡಬೇಕಾಗುತ್ತದೆ. ಈಗ ವಸ್ತುತಃ ಅಲ್ಲೇ ವಾಸ. ಉಪ್ಪು, ಸೀಮೇಎಣ್ಣೆ ಇವೆರಡು ಹೊರತು, ನಮ್ಮ ಹಳ್ಳಿಯ ಜೀವನಕ್ಕೆ ಬೇಕಾದ ಎಲ್ಲ ಸಾಮಗ್ರಿಗಳೂ ಅಲ್ಲೇ ಒದಗುವಂತೆ ಮಾಡಬೇಕೆಂಬುದು ಅವನ ಧ್ಯೇಯ. ದೊಡ್ಡ ದೀಕ್ಷೆಯನ್ನೇ ಹೊತ್ತಿದ್ದಾನೆ.

ಬಟ್ಟೆಗಳು ಕೂಡಾ ಅಲ್ಲೇ ಆಗುತ್ತವೆ. ಚರಕದ ಸೂಲು, ಹಳ್ಳಿಯ ಮಗ್ಗ. ಬಟ್ಟೆಯ ರಾಶಿ. ಹಣವನ್ನು ಎರಚುತ್ತಿದ್ದಾನೆ. ಕೆರೆಯ ನೀರನ್ನು ಕೆರೆಗೇ ಎರಚಲೇಳಿ. ಸ್ವಾಮಿ ಕೊಟ್ಟ ಹಣ, ಸ್ವಾಮಿಯ ಸೇವೆಗೇ ಸಲ್ಲಲಿ. ಬದನ ವಾಳದಲ್ಲಿ ಸರ್ಕಾರದವರು ಖಾದಿ ಕಾರ್ಯಾಲಯ ಏರ್ಪಾಡು ಮಾಡಿರೋ ದನ್ನ ಎಷ್ಟು ಹೊಗಳಿದರೂ ಅವನಿಗೆ ತೃಪ್ತಿಯಿಲ್ಲ. ಯಾವ ಸರ್ಕಾರ ದೋರೂ ಹೀಗೆ ಪ್ರೋತ್ಸಾಹಕೊಟ್ಟಿಲ್ಲ ಅಂತ ಬಾಯಿತುಂಬ ಹೊಗಳ್ತಾನೆ.

**ರಂಗರಾಯ.**—ಒಳ್ಳೇ ಕೆಲಸ, ಒಳ್ಳೇ ಕೆಲಸ. ಈ ಊರಲ್ಲಿ ಖಾದಿ ಎಗ್ಜಿಬಿಷನ್ ನಡೆದಾಗ ನಾವು ಕೆಲವರು "ದುಪಟಿ ಪಟಾಲಂ" ಅಂತ ಹಾಸ್ಯಮಾಡ್ತಾ ಇದ್ದೆವು. ಈಗ ಯೋಚಿಸಿ ನೋಡಿದರೆ, ಎಂಥ ಕೈಗಾರಿಕೆ ಕಳೆದುಕೊಂಡೆವೋ ಅನ್ನಿಸುತ್ತೆ ನೋಡಿ. ಇದು ಹೋಗಲಿ. ನಿಮ್ಮ ಅಳಿಯನ ಹೆಸರು ಎಲ್ಲೆಲ್ಲೂ ಪ್ರಖ್ಯಾತವಾಗಿದೆ, ಸ್ವಾಮಿ, ಎಲ್ಲಿ ಸಿಕ್ಕಿದ ಆತ? ಒಳ್ಳೆ ಬೇಟೇನೇ ಕೈಗೆ ಬಿತ್ತೇ ನಿಮಗೆ? ಅವತ್ತೇ ಕೇಳಬೇಕೆಂದಿದ್ದೆ. ಆದರೆ, ನಾನೂ, ನೀವೂ ಸೇರಿದ್ದೂ, ಹಿಂದಿನ ಮನಸ್ತಾಪ ಹೋದದ್ದೂ ಅವತ್ತೇ ಮೊದಲು. ಆದ್ದರಿಂದ ಕೇಳಲಿಲ್ಲ.

**ರಾಮಾಜೋಯಿಸ.**—ರಾಮಚಂದ್ರನ್ ಅಂತ ಒಬ್ಬ ಹುಡುಗನಿದ್ದ.

**ರಂಗರಾಯ.**—ಇದೇನು ಜೋಯಿಸರೆ, ಕಥೆ ಹಾಗೆ ಹೇಳ್ತೀರಿ? ನಾನು ಅನ್ಯಾಯ ಮಾಡಿದ ಹುಡುಗ ನನಗೆ ಗೊತ್ತಿಲ್ಲವೆ? (ನಿಟ್ಟುಸಿರು ಬಿಡುವನು.)

**ರಾಮಾಜೋಯಿಸ.**—ಜೀವನವೇ ಒಂದು ಕಥೆ ಸ್ವಾಮಿ. ರಾಮ ಚಂದ್ರನ್ ಎಂಬವನೇ ಈಗಿನ ರಾಮಚಂದ್ರಯ್ಯ. ರಾಮಚಂದ್ರನ್ ಎಂಬುದು ಮೈಸೂರಿನವರ ಹೆಸರಿನ ಹಾಗಿರಲಿಲ್ಲವೆಂತ ಹೀಗೆ ಬದಲಾಯಿಸಿ ಕೊಂಡ. ಹಿಂದೆ ಮುನ್ನೂರು ರೂಪಾಯಿಗಳೊಡನೆ ಓಡಿಹೋಗಿ ಬೊಂಬಾಯಿ ನಗರವನ್ನು ಸೇರಿ, ಆ ಹಣದಿಂದ ವ್ಯಾಪಾರಮಾಡಿದ. ಧನಿಕ ನಾದ. ಹತ್ತಿರ ಹತ್ತಿರ ಆರು ವರ್ಷವಾಯಿತು. ನೀವು ಅನ್ಯಾಯ ಮಾಡಲೂ ಇಲ್ಲ, ಒಂದೂ ಇಲ್ಲ. ಎಲ್ಲಾ ದೈವ ಸಂಕಲ್ಪ. ಸೂತ್ರದ ಬೊಂಬೆಗಳ ಹಾಗೆ ನಮ್ಮನ್ನು ಕುಣಿಸೋನು ಭಗವಂತ ಇದ್ದಾನೆ. ಈಗ

ಮೂರು ವರುಷಕ್ಕೆ ಹಿಂದೆ ನನಗೆ ಕಾಗದ ಬರೆದಿದ್ದ. ಅದರಿಂದ ನನ್ನ ಹೃದಯವೇ ಕಲಕಿಹೋಗಿ ಅದಕ್ಕೆ ನಾನು ಉತ್ತರ ಬರೆದೆ. ಲಲಿತೆಗೆ ಮದುವೆ ಅಂತ ಬರೆದಿದ್ದೆ. ಇನ್ಯಾರಿಗೋ ಕೊಟ್ಟು ಮದುವೆ—ಅಂತ ಕೊರಗಿ ಸೊರಗಿ ಓಡಿಬಂದ. ಅವನಿಗೇ ಕೊಟ್ಟು ಮದುವೆಯೆಂದು ತಿಳಿದು ಕುಣಿದಾಡಿದ. ಕೊನೆಗೆ ಮದುವೆಯಾಯಿತು.

**ರಂಗರಾಯ.**—ಯಾವುದಕ್ಕೂ ಅದೃಷ್ಟವಿರಬೇಕು, ಜೋಯಿಸರೆ. ಅವನ ವಿಷಯದಲ್ಲಿ ನಾನು ಬಹಳ ತಪ್ಪುಮಾಡಿದೆ ನೋಡಿ.

**ರಾಮಾಜೋಯಿಸ.**—ತಪ್ಪೂ ಇಲ್ಲ, ಒಂದೂ ಇಲ್ಲ. ತಾವು ಈ ಸಲ ಮೆಂಬರಾಗಬೇಕು ಅಂತ ಅವನಿಗೆ ಇಷ್ಟ.

**ರಂಗರಾಯ.**—ಜೋಯಿಸರೆ, ನೀವು ಹೀಗೆ ಮರ್ಮಭೇದಕವಾಗಿ ಮಾತಾಡ್ತೀರಿ ಅಂತಿರಲಿಲ್ಲ. ನೀವೂ ನನ್ನನ್ನು ಅಪಹಾಸ್ಯಮಾಡೋದೆ?

**ರಾಮಾಜೋಯಿಸ.**—ಖಂಡಿತವಾಗಿಯೂ ಹಾಗಿಲ್ಲ, ಸ್ವಾಮಿ. ನೀವೂ ಅವನ ಜೊತೆಯಲ್ಲಿ ಗ್ರಾಮಾಭಿವೃದ್ಧಿ ಕಾರ್ಯದಲ್ಲಿ ಸೇರಬೇಕು. ಅದು ಅವನ ಆಸೆ. ನಿಮ್ಮ ಹುಡುಗ ಪಿಶಾಚಿಯಾಗ್ತಾನೆಂತ ಅವನು ದೂಷಿಸಿದನಂತೆ. ಅದರಿಂದಲೇ ವೈಮನಸ್ಯ ಹುಟ್ಟಿದ್ದು. ಅದುವರೆಗೂ ನೀವು ಪೋಷಿಸಿದ್ದಕ್ಕಾಗಿ ಅವನು ಕೃತಜ್ಞನಾಗಿದ್ದಾನೆ. ಅವನೂ ತಮ್ಮ ದರ್ಶನಕ್ಕಾಗಿ ಈಗ ಇಲ್ಲಿಗೆ ಬರ್ತಾನೆ. ದಾರೀಲಿ ಯಾರೋ ಸ್ನೇಹಿತರು ಸಿಕ್ಕಿದರು. ಮಾತಿಗೆ ನಿಂತ. ನಮ್ಮೂರು ಗೌಡನೂ ಈ ಸಲ ನಮ್ಮ ತಾಲ್ಲೂಕಿನಿಂದ ಮೆಂಬರಾಗುವ ಪ್ರಯತ್ನದಲ್ಲಿದ್ದಾನೆ. ಅವನೂ ಸಂಭಾವಿತ ಸ್ವಾಮಿ. ತಾವೂ, ಗೌಡನೂ, ಮೆಂಬರಾಗುವಂತೆ ಮಾಡ ಬೇಕೆಂಬುದೇ ರಾಮಚಂದ್ರಯ್ಯನ ಆಸೆ. ತಾವು ಒಪ್ಪಿದರೆ ಅವನ ಸಂತೋಷಕ್ಕೆ ಪಾರವೇ ಇಲ್ಲ.

**ರಂಗರಾಯ.**—ಎಂಥ ಹುಡುಗ ಸ್ವಾಮಿ! ನಾನು ಎಲೆಕ್ಷನ್ನಿಗೆ ನಿಂತರೆ ಸಿಕ್ಕುತ್ತೆಯೇ, ಸ್ವಾಮಿ? ಆಗದ ಕೆಲಸಕ್ಕೆ ಕೈಹಾಕಲೇಕೆ? ನಾನು ಮೊಟ್ಟಮೊದಲು ಎಲೆಕ್ಷನ್ನಿಗೆ ಕೈಹಾಕಿದ್ದರಿಂದ, ಈಚೆಗೆ ಕನ್ನಡ

ಚೆನ್ನಾಗಿ ಕಲಿತುಕೊಂಡೆ. ಅದೊಂದು ದೊಡ್ಡ ಕೆಲಸವಾದ ಹಾಗಾಯಿತು. ನಿಮ್ಮಳಿಯನೂ, ಇತರರೂ ಮಾಡ್ತಾ ಇರೋ ದೇಶಸೇವೆ ನೋಡಿ ನೋಡಿ, ನಿಜವಾದ ದೇಶಸೇವೆ ಸ್ವಭಾವ ಅರಿತುಕೊಂಡೆ.

**ರಾಮಾಜೋಯಿಸ.**—ಈ ಸಲ ಮೆಂಬರಾಗಿ ನಿಜವಾದ ದೇಶ ಸೇವೆಗೆ ಇಳಿದು ನಮ್ಮನ್ನೆಲ್ಲಾ ಸಂತೋಷಪಡಿಸಿಬಿಡಿ ಮತ್ತೆ.

**ರಂಗರಾಯ.**—ನನ್ನ ಸಂಸಾರದಲ್ಲಿ ಇದೊಂದು ದೊಡ್ಡ ಪೆಡಂಭೂತ ಒದಗಿದೆಯಲ್ಲಾ ಸ್ವಾಮಿ? (ನಿಟ್ಟುಸಿರುಬಿಟ್ಟು) ದೊಡ್ಡ ಪೆಡಂಭೂತ.

**ರಾಮಾಜೋಯಿಸ.**—ಅದರ ಪಾಡಿಗೆ ಅದು, ಇದರ ಪಾಡಿಗೆ ಇದು. ಅದಕ್ಕೂ ದಾರಿ ಹುಡುಕೋಣ. ತಾಳ್ಮೆ, ಕ್ಷಮೆ, ಇವೆರಡು ಗುಣ ಗಳಿದ್ದರೆ ಎತ್ತಲೂ ಭಯವಿಲ್ಲ. ಕೃಷ್ಣಮೂರ್ತಿ ಮದುವೆಯೇನೋ ಮಾಡಿ ಕೊಂಡುಬಿಟ್ಟ. ನೀವು ಶಾಂತರಾಗಿ ಕ್ಷಮೆ ತೋರಿಸಿಬಿಡಿ.

**ರಂಗರಾಯ.**—ಇದೇನು ಸ್ವಾಮಿ ಈ ವಿಪರೀತ? ಆ ಮುದ್ದು ಸೊಸೇನ ಗೃಹಪ್ರವೇಶ ಮಾಡಿಸಿ, ಮಾಂಸ ಬೇಯಿಸಿ ಹಾಕೂ ಅಂತೀ ರೇನು ನನ್ನ?

**ರಾಮಾಜೋಯಿಸ.**—ಲೌಕಿಕರ ಅನಾಚಾರ ಕಂಡರೆ ವೈದಿಕರಿಗೂ ಹೀಗೇ ರೇಗಿಹೋಗುತ್ತೆ. ಆದರೆ, ರೇಗುವುದು ತಪ್ಪು. ಇದು ಅನುಭವದ ಮಾತು. ಶಾಂತಿ ಸಹಿಷ್ಣುತೆಗಳೇ ನಮ್ಮ ಕಾಮಧೇನು ಕಲ್ಪವೃಕ್ಷಗಳು ಸ್ವಾಮಿ. ಲೌಕಿಕರು ವೈದಿಕರನ್ನು ಗೊಡ್ಡುಗಳು ಅಂತಾರೆ. ನಿಮ್ಮ ಮಗನ ಹೆಂಡತಿ ನಿಮ್ಮನ್ನು ನಾಗರಿಕತೆಯಿಲ್ಲದ ಗೊಡ್ಡು ಅಂತಾಳೆ. ವಿಲಕ್ಷಣ ಪ್ರಪಂಚ ಸ್ವಾಮಿ, ವಿಲಕ್ಷಣ ಪ್ರಪಂಚ. ಅವರ ಪಾಡಿಗೆ ಅವರು ಬೇರೆ ಇರಲಿ. ಅವನುಂಟು, ಅವನ ಸಂಬಳವುಂಟು. ನೀವು ಪ್ರೀತಿ ಯಾಗಿರೋದಕ್ಕೇನಂತೆ? ಅವರ ಮನೆಗೆ ಹೋಗಿ ಬರೋದಕ್ಕೇನಂತೆ. ಊಟಉಪಚಾರಕ್ಕೆ ಮೈಲಿಗೆಯಾದರೆ ಪ್ರೀತಿಗೆ ಮೈಲಿಗೆಯೆ? ನನ್ನ ಮಾತುಕೇಳಿ, ಆದ್ದು ಆಗಿಹೋಯಿತು. ಇನ್ನು ಹಾರಾಡಿ ಫಲವಿಲ್ಲ.

**ರಂಗರಾಯ.**—ನೀವು ದೇವರಂಥೋರು, ಜೋಯಿಸರೆ.

**ರಾಮಾಜೋಯಿಸ.**—ಹಾಗೆ ಮಾತ್ರ ಹೇಳಬೇಡಿ. ಹುಲ್ಲಿಗೂ ಕಡೆ ಯಾದ ನನ್ನಂಥ ಮನುಷ್ಯನನ್ನು ದೇವರಿಗೆ ಹೋಲಿಸುವುದು ಮಹಾ ಪಾಪ. ಈ ಮಾತೆಲ್ಲಾ ಹಾಗಿರಲಿ. ನೀವು ಈ ಸಾರಿ ಮೆಂಬರಾಗೋಕೆ ಇಷ್ಟವುಂಟಷ್ಟೆ?

**ರಂಗರಾಯ.**—ಕಳೆದ ಸಾರಿ ನನ್ನ ಪ್ರಯತ್ನ ಹಾಳಾಯಿತು. ಈಗಿನ ಬ್ರಾಹ್ಮಣ ಬ್ರಾಹ್ಮಣೇತರ ಕಲಹದಲ್ಲಿ ನನಗೆ ವೋಟು ಸಿಕ್ಕೀತೆ?

**ರಾಮಾಜೋಯಿಸ.**—ನೀವು ದೇವರ ಮೇಲೆ ಭಾರ ಹಾಕಿ ಕೆಲಸ ಮಾಡಿ. ಕೆಲಸವು ನಮ್ಮ ಅಧೀನ. ಫಲವು ಭಗವದಧೀನ. ಇದಕ್ಕೇಕೆ ಯೋಚನೆ? ಬ್ರಾಹ್ಮಣನು ಮಾತ್ರ ತನ್ನ ಸಾತ್ವಿಕ ಸ್ವಭಾವವನ್ನುಳಿಸಿ ಕೊಂಡು ತೋರ್ಪಡಿಸಿಕೊಂಡರೆ ಯಾರೂ ಎದುರು ಬೀಳರು. ಬ್ರಾಹ್ಮಣ ರಲ್ಲಿ ಕೆಲವರು ನರಭಕ್ಷಕರಂತಾದ್ದೇ ಈಗಿನ ಹಗರಣಕ್ಕೆಲ್ಲ ಕಾರಣ. ಯಾವ ಜಾತಿಯಾದರೇನು ಸ್ವಾಮಿ, ಗುಣವೇ ಪ್ರಧಾನ. ಗುಣವೇ ಪೂಜಾ ಸ್ಥಾನ. ಜಾತಿಯಲ್ಲಿ ಬ್ರಾಹ್ಮಣನಲ್ಲದಿದ್ದರೂ, ಗುಣದಲ್ಲಿ ಎಷ್ಟೋ ಜನ ಬ್ರಾಹ್ಮಣರನ್ನು ಮೀರಿಸಿದ್ದ ವಿವೇಕಾನಂದರ ಪಠಕ್ಕೆ ನಾನೂ ಕೈಮುಗಿ ದಿದ್ದೇನೆ. ನಾವು ಪೂಜಿಸುವುದು ಜಾತಿಯಲ್ಲಿ ಬ್ರಾಹ್ಮಣರಲ್ಲದ ರಾಮ, ಕೃಷ್ಣ, ಇವರನ್ನೇ. ಜಾತಿಯಲ್ಲಿ ಬ್ರಾಹ್ಮಣನಾದ ಪರಶುರಾಮನಿಗೆ ದೇವಸ್ಥಾನವನ್ನು ಯಾರು ಕಟ್ಟಿದ್ದಾರೆ ಹೇಳಿ. ಈ ಒಳ ಮರ್ಮವನ್ನು ತಿಳಿಯದೆ ಕೆಲವರು ಮಿಡತೆಗಳಂತೆ ಹಾರಾಡುತ್ತಾರೆ. ವೈದಿಕರಲ್ಲೂ ತಪ್ಪಿದೆ. ಅವರಲ್ಲಿ ಅನೇಕರಿಗೆ ಹೃದಯ ವೈಶಾಲ್ಯವಿಲ್ಲ. ಬ್ರಾಹ್ಮಣರಲ್ಲೂ ತಪ್ಪಿದೆ. ಬ್ರಾಹ್ಮಣೇತರರಲ್ಲೂ ತಪ್ಪಿದೆ. ಉಭಯತ್ರರಲ್ಲೂ, ಒಳ್ಳೆಯವರೂ, ಕೆಟ್ಟ ವರೂ, ಎರಡು ಬಗೆಯವರೂ ಇದ್ದಾರೆ. ಒಕ್ಕಟ್ಟಿನ ಕಾಲವೂ ಬಂದೇ ಬರುತ್ತದೆ.

**ಯಶೋದಮ್ಮ.**—(ಪ್ರವೇಶಿಸಿ ರಾಮಾಜೋಯಿಸನ ಕಾಲುಗಳನ್ನು ಮುಟ್ಟಿ ನಮಸ್ಕರಿಸುವಳು.)

**ರಾಮಾಜೋಯಿಸ.**—ದೀರ್ಘಸುಮಂಗಲೀ ಭವ. (**ಮುಖವನ್ನು ದೃಷ್ಟಿಸಿ ನೋಡಿ**) ಇದೇಕಮ್ಮ ಅಳುತ್ತೀರಿ?

**ಯಶೋದಮ್ಮ.**—(ಕಣ್ಣುಗಳನ್ನು ಒರೆಸಿಕೊಂಡು, ಗದ್ಗದ ಧ್ವನಿಯಿಂದ) ಏಕೂ ಇಲ್ಲಪ್ಪ. ಹೀಗೆ ವಿವೇಕ ಹೇಳೋರೇ ಇರಲಿಲ್ಲ. ನಿಮ್ಮನ್ನ ಕಂಡರೆ ಲಕ್ಷ್ಯವಿರಲಿಲ್ಲ. ನಾನು ಸರಿಯಾಗಿದ್ದರೆ, ನಮ್ಮ ಕಿಟ್ಟು ಹೀಗಾಗುತ್ತಾ ಇರಲಿಲ್ಲವೋ ಏನೋ!

**ರಾವಸಾಹೇಬ ಜೋಯಿಸ.**—ಸಮಾಧಾನ ಮಾಡಿಕೊಳ್ಳಿ. ಇದಕ್ಕೆಲ್ಲಾ ಅತ್ತರೆ ಹೇಗೆ, ತಾಯಿ?

**ಕೃಷ್ಣಮೂರ್ತಿ.**—(ಐರೋಪ್ಯ ದೇಶೀಯನ ಉಡುಪನ್ನು ಧರಿಸಿ ಪ್ರವೇಶಿಸುವನು. ಕೈಯಲ್ಲಿ ಹೊಗೆಯಾಡುತ್ತಿರುವ ಸಿಗಾರು ಇರುವುದು) Father, I am sorry you have insulted my wife. ಒಳಗೆ ನೀವಿಬ್ಬರೂ ಮಾತಾಡ್ತಾ ಇದ್ದರಂತೆ. ಹಾಗಿದ್ರೂ ಇಲ್ಲಾ ಅಂತ ಹೇಳಿಸಿದ್ದೀರಿ. ನಾನು ಒಬ್ಬ friend ಮನೇಗೆ ಹೋಗಿದ್ದೆ. She came alone and called on you. ಇಷ್ಟು ಅನ್ಯಾಯ. ಈ Indians ಯೋಗ್ಯತೆಯೇ ಇಷ್ಟು. Dirty habits.

**ರಂಗರಾಯ.**—ನೀನೂ Indian. ಹಿಂದು ಮುಂದು ತಿಳಿಯದೆ ಹರಟಬೇಡ. ಹಲ್ಲು ಹಿಡಿದು ಮಾತನಾಡು. ನಿನಗೆ ಹಣ ತೆತ್ತು ತೆತ್ತು ಚಿಕ್ಕತಲೆ ದೊಡ್ಡದು ಮಾಡಿದ್ದಕ್ಕೆ ನೀನು ಇಷ್ಟಕ್ಕೆ ಬಂದೆ. ನನ್ನ ರೇಗಿಸದೆ ಸುಮ್ಮನೆ ಹೊರಟುಹೋಗು.

**ರಾವಸಾಹೇಬ ಜೋಯಿಸ.**—ಕೈಲಿರೋ ಹೊಗೇ ಬತ್ತಿ ಆರಿಸಿಬಿಡು ಮಹಾರಾಯಾ, ನನ್ನ ಹೊಟ್ಟೆ ತೊಳಸ್ತಾ ಇದೆ, ಅದರ ದುರ್ವಾಸನೆಗೆ.

**ಕೃಷ್ಣಮೂರ್ತಿ.**—ನಿಮ್ಮ ಅಕ್ಷತೆ ನೋಡಿದರೆ ನನಗೂ ತಲೆ ತಿರುಗುತ್ತೆ; ಅದನ್ನು ಅಳಿಸೀ ಮತ್ತೆ. Well father, she is my wedded wife. You had no business to insult her like that.

**ರಂಗರಾಯ.**—ನಿನ್ನ wedded wife ಆರೂ ಆಗಲಿ, ಏನಾದರೂ ಆಗಲಿ, ನನಗೇನಂತೆ. Get out, you, silly goose. ಇವನಿಗೇ ಇಂಗ್ಲಿಷ್ ಬರೋದು. You had no business to call us your dependants. ನಿನ್ನ ಹೆಂಡತಿ ಕೈಲಿ ನಮ್ಮನ್ನು ಅಪ್ಪ ಅಮ್ಮ ಅಂತ ಹೇಳಿಕೊಳ್ಳೋಕೆ ಕೂಡ

ನಿನಗೆ ಅವಮಾನವಾಯಿತು. ನಾನು ಭಿಕ್ಷಕ್ಕೆ ಹೊರಡೋ ಹಾಗಾದರೂ ನಿಮ್ಮ ಮನೆಗೆ ಬೇರೇ ಭಿಕ್ಷಕ್ಕೆ ಬರೋದಿಲ್ಲ.

**ರಾಮಚಂದ್ರಯ್ಯ.**—(ಪ್ರವೇಶಿಸಿ) ನಮಸ್ಕಾರ ರಂಗರಾಯರಿಗೆ. ನಮಸ್ಕಾರವಯ್ಯ ಕೃಷ್ಣಮೂರ್ತಿ. ನೀವು ಕೂಗಾಡಿದ್ದು ಬೀದಿಗೇ ಕೇಳಿಸ್ತಾ ಇದೆ. ದೊಡ್ಡವರಿಗೆ ವಿಧೇಯರಾಗಿರುವುದು ನಮ್ಮ ಕರ್ತವ್ಯ ವಯ್ಯ.

**ರಂಗರಾಯ.**—ರತ್ನದಂಥ ಹುಡುಗ, ರತ್ನ, ರತ್ನ, ನನ್ನ ತಪ್ಪ ನ್ನೆಲ್ಲಾ ಕ್ಷಮಿಸಿಬಿಡು ನನ್ನಪ್ಪ. (ರಾಮಚಂದ್ರಯ್ಯನನ್ನು ಆಲಿಂಗಿಸುವನು.)

**ರಾಮಚಂದ್ರಯ್ಯ.**—ತಾವು ಅನ್ನವಿಟ್ಟವರು. ತಪ್ಪು ನನ್ನದು. ನಾನು ಬಾಯಿತಪ್ಪಿ ದುಡಕಿ ನುಡಿದೆ. ತಾವು ಕ್ಷಮಿಸಬೇಕು. ಕೃಷ್ಣ ಮೂರ್ತಿ, ನಾನು ಹಿಂದಿನ ಸಲಿಗೆಯ ಮೇಲೆ ಒಂದೆರಡು ಮಾತು ಹೇಳ್ತೀನೆ. ನಿನ್ನ ವಿಷಯವೆಲ್ಲಾ ಕೇಳಿದ್ದೇನೆ. ಈಗ ರಾಯರು ಹೇಳಿದರಲ್ಲಾ, ಅದು ಮಾತ್ರ ಕೇಳಿರಲಿಲ್ಲ. ನೀನು ಹಾಗೆ ಮಾಡಿದ್ದು ನ್ಯಾಯವೇ ಎನ್ನೋದನ್ನು ನೀನೇ ಯೋಚಿಸು. ನಮ್ಮ ದೇಶದಲ್ಲಿರೋ ರಗಳೆ ಒಂದೇ ಮಾತಿನಲ್ಲಿ ಹೇಳ್ತೀನೆ ಕೇಳು. ನಮ್ಮಲ್ಲಿ ಮುಸಲ್ಮಾನರು, ಹಿಂದುಗಳು, ಬ್ರಾಹ್ಮಣರು, ಬ್ರಾಹ್ಮಣೇತರರು, ಗಂಡಸರು, ಹೆಂಗಸರು, ಮಕ್ಕಳು, ಎಲ್ಲರೂ ಹಕ್ಕು ಗಳಿಗೆ ಹೊಡೆದಾಡುವವರೇ ಆಗಿದ್ದೇವೆ. ಕರ್ತವ್ಯಸಾಧನೆಗೆ ಹೋರಾಡುವರು ಹೆಚ್ಚು ಮಂದಿಗಳಿಲ್ಲ. We are after our rights, my dear fellow, and not after our duties and that is the whole truth about our miseries. ಈಗ ಹಕ್ಕುಗಳಿಗೆ ಹೇಗೆ ಹೋರಾಡುತ್ತೇವೋ ಹಾಗೇ ನಮ್ಮ ಕರ್ತವ್ಯಗಳಿಗೂ ಹೋರಾಡಿ ದೇಶಸೇವೆ ಮಾಡಬೇಕು. ಆಗಲೇ ನಮ್ಮ ದೇಶಕ್ಕೂ ನಮ್ಮ ಸಮಾಜಕ್ಕೂ ಸೌಭಾಗ್ಯದಶೆ. ಆರ್ಯಧರ್ಮ ಶ್ರೇಷ್ಠವಾದ್ದು ಕರ್ತವ್ಯವೇ ಪ್ರಧಾನವೆಂದು ಎಣಿಸಿ ಅದರಂತೆ ನಡೆದದ್ದರಿಂದ. ಹೊರಗಿನೋರು ದೊಡ್ಡೋರಾಗಿರೋದು ಕರ್ತವ್ಯಪರರಾಗಿರುವುದರಿಂದ.

**ಯಶೋದಮ್ಮ.**—ಕಿಟ್ಟು, ಕಿಟ್ಟು, ನಮ್ಮ ಹೃದಯ ಒಡೆದು ಚೂರು ಮಾಡಬೇಡವೋ. (ಗದ್ಗದ ಧ್ವನಿಯಿಂದ) ಅವನ ವಿವೇಕದ ಮಾತು ಕೇಳಿ

ನೀನೂ ಉದ್ಧಾರವಾಗಿ ನಮ್ಮನ್ನೂ ಉದ್ಧಾರಮಾಡಪ್ಪ. ಎಷ್ಟಾದರೂ ನೀನು ನಮ್ಮ ಮಗುವೇ ಅಲ್ಲವೆ?

**ಕೃಷ್ಣಮೂರ್ತಿ.**—ನೀವು ಅಂದದ್ದೇ ಸಾಲದೆ ಇತರರ ಕೈಯಲ್ಲೂ ಅನ್ನಿಸುತ್ತಿದ್ದೀರಿ. ನನ್ನ ಹೆಂಡತಿ ಈ ಮನೆಯ ಬಾಗಿಲಿಗೂ ಬಾರದೆ ದೂರದಲ್ಲಿ ಗಾಡಿಯಲ್ಲಿ ಕಾದಿದ್ದಾಳೆ. Father, your behaviour....

**ರಂಗರಾಯ.**—ಸಾಕೋ ನಿನ್ನ ಇಂಗ್ಲಿಷ್ ಮಾತು. ನನ್ನ ಮೇಲೇ ಕೋಗೀರು. ಬೆಳಗ್ಗೆ ಪೇಟೆಗೆ ಹೋಗೋವಾಗ ಯಾರಾದರೂ ಬಂದರೆ ಮನೇಲಿಲ್ಲಾ ಅಂತ ಹೇಳೋ ಅಂದಿದ್ದೆ. ಆ ಲತೀಫ್ ಈದಿನವೆಲ್ಲಾ ಹಾಗೇ ಹೇಳಬೇಕೇನೋ ಅಂತ ತಿಳಿದುಕೊಂಡುಬಿಟ್ಟ. ನಾನು ಮನೇಲಿಲ್ಲವೆಂದ. (ಮುಷ್ಟಿಯನ್ನು ಬಿಗಿ ಹಿಡಿದು ಮೇಲಕ್ಕೂ ಕೆಳಕ್ಕೂ ಬೀಸುತ್ತಾ) ಏನು, ಪ್ರಪಂಚ ಮುಳುಗಿಹೋಯ್ತು? ನಿನ್ನ ಹೆಂಡತಿಗೆ ಮಾನ ಮುಕ್ಕಾದ್ದೇನು?

(ಕೃಷ್ಣಮೂರ್ತಿಯು ಕೋಪದಿಂದ ಉರಿಯುವನು.)

**ರಾಮಚಂದ್ರಯ್ಯ.**—ಕೃಷ್ಣಮೂರ್ತಿ, ಹಿಂದಿನ ಸ್ನೇಹವನ್ನು ನೆನೆ. ನಾನು ಇಂದು "ಇತರ"ನಾದೆ? ಎರಡು ನಾಗರಿಕತೆಗಳ ತಿರುಳನ್ನೂ ತಿಳಿಯದೆ, ಅವುಗಳ ಸಿಪ್ಪೆಯನ್ನೇ ಆಶ್ರಯಿಸಿದರೆ, ಇದೇ ಫಲ. ಬೇಡ, ಬೇಡ, ಖಂಡಿತವಾಗಿಯೂ, ದುಡುಕಬೇಡ. ನಮಗೆ ಬೇಕಾದದ್ದೇನು? ಭಾರತೀಯ ನಾಗರೀಕತೆಯ ಸಾರ; ಪಾಶ್ಚಾತ್ಯ ನಾಗರೀಕತೆಯ ತಿರುಳು, ನಮಗೆ ಬೇಕಾದದ್ದೇನು? ದೇಶಮಾತೆಯ ಸೇವೆ; ಸುಖಜೀವನ; ಸಚ್ಚಾರಿತ್ರ. ನಮಗೆ ಬೇಕಾದದ್ದೇನು? ಸಾತ್ವಿಕ ಪ್ರೇಮದ ರಸಘಟ್ಟಿ.

**ಯಶೋದಮ್ಮ.**—ಕಿಟ್ಟು, ಕಿಟ್ಟು, ಅವನ ಮಾತನ್ನು ಕೇಳು. ದೇಶವೇ ಅವನನ್ನು ಹೊಗಳುತ್ತಿದೆ. ಅವನ ಮಾತಿಗೆ ಬೆಲೆಕೊಡು. ಎಷ್ಟಾದರೂ ನೀನು ನಮ್ಮ ಮಗು. ನನ್ನ ಮಾತು ಕೇಳಪ್ಪ. ಕೇಳು, ಕಂದ.

**ಅಬ್ದುಲ್ ಲತೀಫ್.**—(ಪ್ರವೇಶಿಸಿ) ಹಯೋ, ಹಯೋ, ಸೀನಪ್ಪ ಏಣಿ ಮೇಲಿಂದ ಬಿದ್ದುಬುಟ್ಟ. ಕೆಳಗೆ ಕಲ್ಲು ತಗಲಿ ಹಣೆ ಘಾಯ ಆಗೈತೆ ರಕ್ತ ಹರೀತಾ ಐತೆ.

**ಯಶೋದಮ್ಮ.**—ಬಹಳ ಗಾಯವಾಗಿದೆಯೇನೊ?

**ಅಬ್ದುಲ್ ಲತೀಫ್.**—ಅಷ್ಟೇನೂ ಇಲ್ಲ. ಹುಷಾರ್ ಇದ್ದಾನೆ. ಆದರೂ ತುಂಬ ನೋವು.

**ರಂಗರಾಯ.**—ಏನೇ ಆಗಲಿ. ಪಾಪ! ಹೋಗಿ ನೋಡೋಣ.

(ಮೇಲಕ್ಕೆದ್ದು ಹೊರಡುವನು.)

**ರಾಮಾಜೋಯಿಸ.**—ಪಾಪ! ಯಾರದಾದರೂ ಜೀವ; ಹೋಗಿ ನೋಡೋಣ.

(ಕೃಷ್ಣಮೂರ್ತಿಯೊಬ್ಬನ ಹೊರತು ಉಳಿದವರೆಲ್ಲರೂ ಹೋಗುವರು. ಕೃಷ್ಣಮೂರ್ತಿಯು ಸಿಗಾರಿನ ಹೊಗೆಯನ್ನೇ ದೃಷ್ಟಿಸಿ ನೋಡುತ್ತ, ಏನನ್ನೋ ಯೋಚಿಸುತ್ತ, ಅವರು ಹೋದ ಕಡೆಗೆ ಮೆಲುನಡೆಯಲ್ಲಿ ಹೊರಡುವನು. ತೆರೆಯು ಬೀಳುವುದು.)

---

## ದೃಶ್ಯ ೩

[ಹಿಂದಿನ ದೃಶ್ಯದಂತೆಯೇ ರಂಗರಾಯರ ಮನೆ. ರಂಗರಾಯ, ಕೃಷ್ಣಮೂರ್ತಿ, ರಾಮಾಜೋಯಿಸ, ರಾಮಚಂದ್ರಯ್ಯ ಇಷ್ಟು ಜನವೂ ಕುಳಿತಿರುವರು. ಯಶೋದಮ್ಮನು ಸ್ವಲ್ಪದೂರದಲ್ಲಿ ಒಂದು ಮೇಜನ್ನು ಒರಗಿಕೊಂಡು ನಿಂತಿರುವಳು.]

**ಕೃಷ್ಣಮೂರ್ತಿ.**—ಜೋಯಿಸರೆ, ಈಗ ಕೆಲವು ದಿನಗಳಿಂದ ನಿಮ್ಮ ಮಾತು ಕೇಳಿ ಕೇಳಿ, ನನಗೆ ಕೂಡ soul force ಬಂದುಹೋಗಿದೆ ನೋಡಿ. ಇಂಗ್ಲಿಷ್ ಬರದೇ ಇದ್ರೂ ಕೂಡ, ಇಷ್ಟು ಸಮಂಜಸವಾಗಿ ಕೇವಲ logical ಆಗಿ ಹೇಳಿಬಿಡ್ತೀರಲ್ಲ, ಎಲ್ಲರ ಬಾಯೂ ಕಟ್ಟಿಹೋಗೋ ಹಾಗೆ. ಅಬ್ಬ! ಏನು ಶಕ್ತಿ ಸ್ವಾಮಿ, ನಿಮ್ಮದು!

**ರಾಮಾಜೋಯಿಸ.**—ಅಲ್ಲಯ್ಯ, ನೀನೂ ಒಳ್ಳೆ ಚೆನ್ನಾಗಿ ಹೇಳ್ತೀಯೇ? ಇಂಗ್ಲಿಷ್ ಭಾಷೆ ಬರೋಕೆ ಮುಂಚೆ ಇಲ್ಲಿ ಜನರೇ ಇರಲಿಲ್ಲವೇನಯ್ಯ? ಚಕ್ರವರ್ತಿಗಳಾದಮೇಲೆ ಚಕ್ರವರ್ತಿಗಳು ಪ್ರಪಂಚವೇ ಬೆರಗಾಗುವ ಹಾಗೆ ದೊರೆತನಮಾಡಲಿಲ್ಲವೆ? ಈ ದೇಶ ಕುಬೇರನ ಕಣಜದಂತಿರೋ ಹಾಗೆ ಅವರು ಮಾಡಿರಲಿಲ್ಲವೇನಯ್ಯ? ಅವರಿಗೆಲ್ಲಾ ಇಂಗ್ಲಿಷೇ ಬರ್ತಾ ಇತ್ತೇ?

**ಕೃಷ್ಣಮೂರ್ತಿ.**—ಹಾಗಾದರೆ, ಇಂಗ್ಲಿಷ್ ಬೇಡ ಅಂತಲೋ ನಿಮ್ಮ ಅಭಿಪ್ರಾಯ ?

**ರಾಮಾಜೋಯಿಸ.**—ಯಾವ ಮಾತಿನಿಂದ ಎಲ್ಲಿಗೋ ಹಾರುತ್ತೀಯಲ್ಲ? ಇಂಗ್ಲಿಷ್ ಬೇಡ ಅಂತೇನೆಯೇ ನಾನು ! ನಮ್ಮ ಸರಸ್ವತಿ ಎಲ್ಲಾ ಭಾಷೆಗಳಿಗೂ ಒಬ್ಬಳೇ ತಾಯಿ. ಕನ್ನಡ ಸರಸ್ವತಿ, ತೆಲುಗು ಸರಸ್ವತಿ, ತಮಿಳು ಸರಸ್ವತಿ, ಇಂಗ್ಲಿಷ್ ಸರಸ್ವತಿ, ಸಂಸ್ಕೃತದ ಸರಸ್ವತಿ ಇರಬೇಕೆಂತ ಯಾರೂ ಹೇಳಲಿಲ್ಲ. ಇಂಗ್ಲಿಷ್ ಬೇಕೇ ಬೇಕು. ಇಂಗ್ಲಿಷ್ ಬರದೇಹೋಗಿದ್ದರೆ ವಿವೇಕಾನಂದ ಸ್ವಾಮಿಗಳನ್ನು ಕೇಳೋರೇ ಇರಲಿಲ್ಲ. ನಮ್ಮ ದೇಶದಲ್ಲಿ ಹಿತ್ತಲ ಗಿಡ ಮದ್ದಾದೀತೇನಯ್ಯ? ನಿನ್ನ ಹೆಂಡತಿಯನ್ನ ಕರೆದುಕೊಂಡು ಬಾ. ಹೋಗು.

**ಕೃಷ್ಣಮೂರ್ತಿ.**—ಭೇಷ್ ! ಭೇಷ್ ! ಎಲ್ಲಾ ಶಾಸ್ತ್ರಿಗಳೂ ಹೀಗಿದ್ದಿದ್ದರೆ! (ಹೋಗುವನು.)

**ರಂಗರಾಯ.**—ಇಷ್ಟು ದಿನ ನೀವು ಸಮಾಧಾನ ಹೇಳ್ತಾ ಇದ್ದದ್ದೇ ಒಂದು ತೂಕ. ಇವತ್ತು ಹೇಳಿದ್ದೇ ಒಂದು ತೂಕ. ಆದರೂ, ನನ್ನ ಮನಸ್ಸಿಗೆ ಏನೋ ಒಂದು ಬಗೆಯಾಗಿದೆ.

**ರಾಮಾಜೋಯಿಸ.**—ಅದೇನೋ ನನಗೆ ತಿಳಿಯದು. ನೀವು ನಿಮ್ಮ ಸೊಸೇನ ಪ್ರೀತಿಸಿದರೇ ಮತ್ತೆ, ನಾನೂ, ರಾಮಚಂದ್ರಯ್ಯನೂ, ನೀವು ಮೆಂಬರಾಗೋಕೆ ಸಂತೋಷವಾಗಿ ಸಹಾಯಮಾಡೋದು.

**ಯಶೋದಮ್ಮ.**—ನನ್ನ ಮನಸ್ಸಿಗಂತೂ, ಭತ್ತ ಮೊಸರು ಕಲಸಿದ ಹಾಗಾಗಿದೆ.

**ರಾಮಾಜೋಯಿಸ.**—ನನ್ನ ಮಾತು ಕೇಳಿ. ಎಲ್ಲಾ ಸರಿ ಹೋಗುತ್ತೆ. ಅಲ್ಲಾ ಸ್ವಾಮಿ, ರಂಗರಾಯರೆ, ಹಿಂದೆ ಅದ್ಯಾರೋ ಅರುಂಡೇಲರಂತಲ್ಲ, ಅವರಿಗೂ, ರುಕ್ಮಿಣಮ್ಮನವರಿಗೂ ವಿವಾಹವಾದ ವರ್ತಮಾನ ಬಂದಿತ್ತಲ್ಲ. ಆಗ ನೀವು ಆಡಿದ ಮಾತು ಈಗ ಆಡಿದ ಹಾಗಿದೆ. ಅದು ನ್ಯಾಯವೆಂತಲೇ ಸಾಧಿಸಿ ಸಿದ್ಧಾಂತ ಮಾಡಿಬಿಟ್ಟಿರಿ. ಈಗ ಮಾತ್ರ ಸೊಸೆಯನ್ನ ಪ್ರೀತಿಸೋಕೆ ಹಿಂತೆಗೆಯೋದೇಕೆ? ನನ್ನ ಮಾತು ಕೇಳಿ.

ಕೃಷ್ಣ ಪರಮಾತ್ಮ ಹೇಳಿಯೇಬಿಟ್ಟಿದ್ದಾನೆ. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ" ಅಂತ. ಗುಣಕರ್ಮ ವಿಭಾಗದಿಂದ ನಾಲ್ಕು ವರ್ಣಗಳನ್ನು ಸೃಷ್ಟಿಸಿದ್ದಾನೆ, ಪರಮಾತ್ಮ. ಹುಟ್ಟು ಜಾತಿ ಪ್ರಸ್ತಾಪವೇ ಅವನು ಎತ್ತಿಲ್ಲ.

**ಯಶೋದಮ್ಮ.**—ಹೇಳದೆ ಅವನಿಗೇನಂತೆ. ನಮಗೆ ಬಂದಿರೋ ಹಾಗೆ ನಿಮ್ಮ ಕೃಷ್ಣ ಪರಮಾತ್ಮನಿಗೂ ವಿಲಾಯಿತಿ ಸೊಸೆ ಬಂದಿದ್ದರೆ, ಆಗ ಅವನು ಯಾವ ರಾಗಾ ಎಳೆಯೋನೋ ತಿಳಿಯೋದು.

**ರಾಮಾಜೋಯಿಸ.**—ಹೀಗೆ ಮಾತನಾಡಬಾರದು, ತಾಯಿ. ರಾಮ, ಕೃಷ್ಣ, ಬುದ್ಧ, ಶಂಕರಾಚಾರ್ಯರು ಇವರೆಲ್ಲಾ ನಮ್ಮ ಜೊತೆ ಆಟದ ಹುಡುಗರಾಗಿದ್ದ ಸಹಪಾಠಿಗಳಲ್ಲಮ್ಮ. ಸರಿಯಾಗಿ ಗೌರವ ಕೊಡ ಬೇಕು.

**ಯಶೋದಮ್ಮ.**—ಅದು ನಾನೂ ಒಪ್ತೇನೆ ಜೋಯಿಸರೆ. ಆದರೆ ನಮ್ಮ ಹೊಟ್ಟೇ ಉರಿ ಅವರಿಗೆಲ್ಲಿತ್ತು ಅಂತ ನನ್ನ ಪ್ರಶ್ನೆ. ಇಷ್ಟೆಲ್ಲಾ ಹೇಳೋರು, ನೀವು ಅವಳ ಕೈಲಿ ಊಟಮಾಡಿ ಮತ್ತೆ.

**ರಾಮಾಜೋಯಿಸ.**—ಎಲ್ಲಾ ಕೆಲಸಕ್ಕೆಬಾರದ ಮಾತೇ ನಿಮ್ಮದು! ನಮ್ಮ ಹುಡುಗಿ ಲಲಿತಂಗೆ ನೇಮವಿಲ್ಲ. ಅವಳ ಕೈಯಲ್ಲಿ ನಾನು ಊಟ ಮಾಡೋದಿಲ್ಲ. ಆದರೆ ಅವಳಲ್ಲಿ ನನಗೆ ಪ್ರೀತಿಯಿಲ್ಲವೆ? ಅವಳು ಹೆತ್ತಿ ದ್ದಾಗ ಹೊಲೆ ಮನೆ ಕಡೆಗೇ ನಾನು ಮೈಲಿಗೆ ಭಯದಿಂದ ಸುಳೀತಾ ಇರ ಲಿಲ್ಲ. ಅವಳಲ್ಲಿ ಪ್ರೀತಿಯಿಲ್ಲವೆಂತ ಇದಕ್ಕೆ ಅರ್ಥವೆ? ಒಂದು ಭಾಗದಲ್ಲಿ ನೋಡಿದರೆ, ನೀವು ನಿಮ್ಮ ಸೊಸೆ ಕೈಲಿ ಊಟಮಾಡಿದರೂ ದೋಷವಿಲ್ಲ. ನಿಮ್ಮನ್ನು ಆಕೆ ಮಾಡಿದ ಅಡಿಗೆ ಊಟಮಾಡಿ ಅಂತ ನಾನೇನೂ ಹೇಳೋ ದಿಲ್ಲ. ಸುಮ್ಮನೆ ಹಾಗೆಂದೆ, ಅಷ್ಟೆ.

**ಯಶೋದಮ್ಮ.**—ಜೋಯಿಸರೆ, ನಿಮ್ಮ ಹಾಗೆ ಬುದ್ಧಿ ಹೇಳೋ ರಿಲ್ಲ, ನೀವು ಒಳ್ಳೆಯವರು, ಅಂತಿದ್ದೆ. ಬುಡಕ್ಕೇ ತಂದಿರಿ. ನಾನಲ್ಲದೆ ಇನ್ನು ಯಾರಾದರೂ ಈ ಮಾತು ಕೇಳಬೇಕಾಗಿತ್ತು. ಅವಳೆಲ್ಲೋ ದುಡ್ಡು ಕೊಟ್ಟು, ತನ್ನ ಕಡೆಗೆ ವಾದಿಸೋ ಹಾಗೆ ಹೇಳಿದ್ದಾಳೆಂತಲೇ ತಿಳಿದು

ಕೊಳ್ಳೋರು. ನಾನು ಹಾಗೆನ್ನೋದಿಲ್ಲ. ಏಕೇ ಅಂದರೆ, ನೀವು ದುಡ್ಡಿನ ಆಸೆಗೆ ತಿಥಿ ಕೂಡ ಹೊತ್ತಿಗೆ ಮುಂಚೆ ಮಾಡಿಸೋರಲ್ಲ.

**ರಾಮಾಜೋಯಿಸ.**—ನನಗೆ ಧನಪಿಶಾಚ ಮೆಟ್ಟಿಕೊಂಡಿಲ್ಲಮ್ಮ. ಹೀಗೇಕೆ ನನ್ನ ಮನಸ್ಸು ನೋಯಿಸುತ್ತೀರಿ? ಬೇಡ, ತಾಯಿ, ಬೇಡ. ವಿದ್ವಾಂಸರಲ್ಲಿಯೂ, ಆನೆ ಹಸುಗಳಲ್ಲಿಯೂ, ನಾಯಿಯಲ್ಲಿಯೂ, ನಾಯಿ ಮಾಂಸವನ್ನು ತಿನ್ನುವವನಲ್ಲಿಯೂ ಪಂಡಿತರು ಸಮದರ್ಶಿಗಳಾಗಿರ ಬೇಕು ಅಂತ ಪರಮಾತ್ಮ ಗೀತೆಯಲ್ಲಿ ಹೇಳಿದ್ದಾನೆ. "ಶುನಿ ಶ್ವಪಾಕೇ ಚ ಪಂಡಿತಾಸ್ಸಮದರ್ಶಿನಃ" ಎಂಬೋದನ್ನ ಓದಿದಾಗ ನಮ್ಮ ಒಣ ಪ್ರತಿಷ್ಠೆ ನೆನೆಸಿಕೊಂಡು, ಎಷ್ಟೋ ಸಲ ಅತ್ತುಬಿಟ್ಟಿದ್ದೀನಿ, ತಾಯಿ. ಅದು ಬಹಳ ಮೇಲಿನ ಮೆಟ್ಟಲಿನವರ ಮಾತು. ನಮ್ಮಂಥವರಿಗೆ ಹೇಳಿದ್ದಲ್ಲ. ಆದರೂ, ಅದು ಸಾಧ್ಯವಾದಷ್ಟು ಆಚರಣೆಗಮ್ಮ ಹೇಳಿರೋದು, ಆಚರಣೆಗೆ. ಕರುಣ ತೋರಿಸೋಕೆ ಹೇಳಿರೋದು.

**ರಂಗರಾಯ.**—ನಿಮ್ಮ ಮಾತು ಕೇಳಿದರೆ, ಮನಸ್ಸೇ ಯಾವುದೋ ಪ್ರಪಂಚಕ್ಕೆ ತೇಲಿಹೋಗುತ್ತೆ, ಜೋಯಿಸರೆ.

**ಯಶೋದಮ್ಮ.**—ನನಗೂ ಸ್ವಲ್ಪ ಹಾಗೇ ಆಗುತ್ತೆ. ಅದಕ್ಕೇ ನಾನು ಮೊದಲೇ ಹೇಳಿದ್ದು, ನನ್ನ ಮನಸ್ಸು ಭತ್ತ ಮೊಸರು ಕಲಸಿದ ಹಾಗಾಗಿದೆ ಅಂತ. ಜೋಯಿಸರೆ, ನಾನು ನಿಮ್ಮ ಮನಸ್ಸು ನೋಯಿ ಸೋದಿಲ್ಲ. ಹಾಗೂ ತೋರುತ್ತೆ, ಹೀಗೂ ತೋರುತ್ತೆ. ಏನು ಮಾಡಲಿ ಹೇಳಿ? ಅದು ಸರಿ. ಊಟದ ಮಾತು ಎತ್ತಿದ್ದರಲ್ಲಾ, ಅದೇನು?

**ರಾಮಾಜೋಯಿಸ.**—(ಸ್ವಲ್ಪ ನಕ್ಕು) ಅದೇ,—ಕೇಳಿ. ನೀವು ಸೀಮೆಯಿಂದ ಬಂದ ಬಿಸ್ಕತ್ತು ಎಷ್ಟೋ ಸಲ ತಿಂದಿದ್ದೀರಿ. ನೀವು ಅದನ್ನ ಹೊಗಳಿ ಹೊಗಳಿ ಹಿಗ್ಗುತ್ತಾ ಇದ್ದದ್ದನ್ನೂ ನಾನು ನೋಡಿದ್ದೀನಿ. ಬಿಸ್ಕತ್ತು ಗಳನ್ನು ದೇವರಾಯ ಸಮುದ್ರದ ಅಡಿಗೆಯೋರು ಮಡೀಲಿ ಮಾಡಿ ಸೀಮೆ ಯಿಂದ ಕೃಷ್ಣಾಜಿನದ ಚೀಲಗಳಲ್ಲೇನಾದರೂ ಕಳಿಸ್ತಾರೇನಮ್ಮ? ನಿಮಗೆ ಕೋಪಬರೋದು ಬಹಳ ಬೇಗ. ಕೋಪ ಮಾಡಿಕೋ ಬೇಡಿ. ನನ್ನ ಮಾತು ನಿಧಾನವಾಗಿ ಯೋಚಿಸಿ ನೋಡಿ. ಬಿಸ್ಕತ್ತು ಮಾಡೋರು ಯಾರು?

ನಿಮ್ಮ ಸೊಸೆಯಂಥೋರು, ಇನ್ನೂ ಬಡವರಾದ ಕೂಲಿಯೋರು, ಮುಟ್ಟಿ ಮಾಡಿದ್ದೇ ತಾನೆ ಬಿಸ್ಕತ್ತು? ನೀವು ಮಾತೆತ್ತಿದರೆ ಸೋಡಾ ವಾಟರ್ ಕುಡೀತೀರಲ್ಲ, ಅದು ಕೊಂಗರು ಮುಟ್ಟಿದ ನೀರಲ್ಲಿ ಮಾಡಿದ್ದು. ಕೊಂಗರು ಯಾರು ಅಂತೀರಿ? ನಮ್ಮ ದೇಶದಲ್ಲಿ ನಿಮ್ಮ ಸೊಸೆಯಂಥೋರ ಮನೇಲಿ ಅಡಿಗೆಯೋರಾಗೋರು.

**ಯಶೋದಮ್ಮ.**—(**ಸ್ವಲ್ಪ ಯೋಚಿಸಿ, ತಲೆಯನ್ನು ಕೊಂಚ ತಗ್ಗಿಸಿ, ಮೇಲಣ ತುಟಿಯನ್ನು ನಾಲಗೆಯಿಂದ ಸವರಿಕೊಂಡು, ಕೆಳ ತುಟಿಯನ್ನು ಹಲ್ಲಿನಿಂದೊತ್ತಿಕೊಂಡು, ಆ ಬಳಿಕ ಸರಕ್ಕನೆ ತಲೆಯನ್ನೆತ್ತಿ**) ನಿಜ, ಜೋಯಿಸರೆ, ನೀವು ಹೇಳೋದೂ ನ್ಯಾಯ. ಆದರೂ, ಕ್ರಿಯಶುದ್ಧಿ ಅಂತಾರಲ್ಲ.

**ರಾಮಾಜೋಯಿಸ.**—(**ಗಟ್ಟಿಯಾಗಿ ನಕ್ಕು**) ಕ್ರಿಯಶುದ್ಧಿಯಂತೆ, ಕ್ರಿಯ ಶುದ್ಧಿ. ಹಿಂದೆ ಮದುವೆ ಮನೇಲಿ ಒಬ್ಬ ಶಾಸ್ತ್ರಿಗಳು ಸ್ವಯಂ ಪಾಕ ನೇಮ ಮಾಡಿದ್ದರಂತೆ. ಆದರೂ, ಅಡಿಗೆಯೋರು ಮಾಡಿದ ಲಾಡು ಕಂಡು ಬಾಯಲ್ಲಿ ನೀರು ಊರಿತು. ತೆಗೆದರೂ ಕಳ್ಳವೇಷಾನ, ಘೃತ ಪಕ್ವಕ್ಕೆ ದೋಷವಿಲ್ಲಾ ಅಂತ. ಬಡಿದರೂ ಲಾಡೂ ಮೇಲೆ ಲಾಡೂನ. ನೀವು ಹೇಳಿದ ಕ್ರಿಯ ಶುದ್ಧಿಯೂ ಅದೇ ಜಾತಿಯದಮ್ಮ. ನಿಮ್ಮ ಮಗ ಎಂಥ ಸಮಯ, ಎಂಥ ಸನ್ನಿವೇಶದಲ್ಲಿ ಮದುವೆಮಾಡಿಕೊಂಡ ಅನ್ನೋದು, ಆ ಹುಡುಗಿ ಸಹಾಯವಿಲ್ಲದೆ ಹೋಗಿದ್ದರೆ ಅವನು ಉಳೀತಾಲೇ ಇರಲಿಲ್ಲ ಅನ್ನೋದು, ಅವಳು ಎಷ್ಟು ಒಳ್ಳೆ ಹುಡುಗಿ ಅನ್ನೋದು ಇದೆಲ್ಲಾ ಕೇಳಿದ್ದೀರಿ. ಇನ್ನು ಚಂಡಿಸಬೇಡಿ, ತಾಯಿ. ಏನೋ, ಆದ್ದು ಆಗಿ ಹೋಯಿತು.

**ಯಶೋದಮ್ಮ.**—ನೀವು ಹೇಳೋದೆಲ್ಲಾ ಸರಿ ಅಂತಲೇ ತೋರುತ್ತೆ. ಆದರೂ ಅವಳನ್ನು ಸೊಸೆ ಅಂತ ಭಾವಿಸಿ ಪ್ರೀತಿಸೋಕೆ ಮನಸ್ಸಿಗೆ ಒಗ್ಗೋದಿಲ್ಲ. ಏನೋ ಒಂದು ಬಗೆಯಾಗಿ ಹೋಗಿದೆ. ಇಷ್ಟಕ್ಕೂ ಇನ್ನೊಬ್ಬರಿಗೆ ಹೇಳೋದು ಸುಲಭ, ಜೋಯಿಸರೆ.

**ರಂಗರಾಯ.**—ಅದಕ್ಕೆ ಹೇಳಿ ಉತ್ತರ.

**ರಾಮಾಜೋಯಿಸ.**—ನಮ್ಮ ಮನೇಲಿ ನಡೆಯದೇ ಇರೋದನ್ನ, ನಾನು ಆಚರಣೆಗೆ ತರಲು ಆಗದೇ ಇರೋದನ್ನ ನಾನು ಯಾರಿಗೂ ಹೇಳೋದಿಲ್ಲ. ಈಗಿನ ಮಾತು ಹಾಗಿರಲಿ. ನಾನು ಹುಡುಗನಾಗಿದ್ದಾಗ ನಮ್ಮ ತಂದೆ ನಡೆಯಿಸಿದ್ದಾದರೂ ಕೇಳಿ. ಒಂದು ದಿನ ಒಬ್ಬ ಬಡ ಮುಸಲ್ಮಾನ ಹೆಂಗಸು ದಿಕ್ಕೆಟ್ಟು ಬಂದಳು.

**ಯಶೋದಮ್ಮ.**—ಅವಳಿಗೆ ಗಂಡ ಇರಲಿಲ್ಲವೆ?

**ರಾಮಾಜೋಯಿಸ.**—ಗಂಡ ಇದ್ದ. ದಂಪತಿಗಳಿಗೆ ವ್ಯಾಜ್ಯ ಬಂತು. ರೋಷದ ಆವೇಗ. ತೌರುಮನೆಗೆ ಹೊರಟುಬಿಟ್ಟಳು. ನಮ್ಮೂರಿಗೆ ಬರೋಹೊತ್ತಿಗೇ ದಣಿದು ತಟ್ಟಾಗಿಬಿಟ್ಟಳು. ಎರಡು ಜೀವದ ಹೆಂಗಸು.

**ರಂಗರಾಯ.**—ಎರಡು ಜೀವದ ಹೆಂಗಸು ಅಂದರೆ?

**ರಾಮಾಜೋಯಿಸ.**—ಅಯ್ಯೋ ರಾಮ! ಈಗಿನ ನಾಗರಿಕತೆ ಪ್ರಭಾವದಲ್ಲಿ ಮನೆಯ ಬಳಕೆ ಮಾತುಗಳಿಗೆ ಕೂಡ ಅರ್ಥವಾಗೋದಿಲ್ಲ. ಮೊನ್ನೆ ಒಬ್ಬ ಗೃಹಸ್ಥ ಹಲಗಾರತಿ ಎಂದರೇನು ಅಂತ ಕೇಳಿದ. ಕಡೆಗೋಲು ಅಂದರೆ ಇನ್ನೊಬ್ಬನಿಗೆ ಅರ್ಥವಾಗಲಿಲ್ಲ. ಕೋಪಿಸಿಕೊಳ್ಳಬೇಡಿ, ರಾಯರೆ. ಎರಡು ಜೀವದ ಹೆಂಗಸು—ಅಂದರೆ ಗರ್ಭಿಣಿ ಅಂತ.

**ಯಶೋದಮ್ಮ.**—ಆಮೇಲೆ, ಆಮೇಲೆ?

**ರಾಮಾಜೋಯಿಸ.**—ಅವಳ ತೌರುಮನೆಗೆ ಇನ್ನೂ ಹನ್ನೆರಡು ಮೈಲಿ ಹೋಗಬೇಕಾಗಿತ್ತು. ಕಾಲು ದಾರಿ. ನಮ್ಮೂರಿಗೆ ಬಂದು ಬಿದ್ದಳು. ಪ್ರಸವವೇದನೆಗೆ ಪ್ರಾರಂಭ. ಊರಿನಲ್ಲಿ ಯಾರೂ ಅವಳಿಗೆ ಸಹಾಯಮಾಡೋಕೆ ಒಪ್ಪಲಿಲ್ಲ. ಮುಸಲ್ಮಾನರ ಮನೆಯಿಲ್ಲ. ಅವಳಿಗೆ ಸಹಾಯಮಾಡಿದರೆ ಹಿಂದುಗಳಿಗೆ ಜಾತಿ ಹೋಗುತ್ತೆ ಅಂತ ಭಯ.

**ರಾಮಚಂದ್ರಯ್ಯ.**—ಅಬ್ಬ! ಎದೆಯೇ ಒಡೆದುಹೋಗುತ್ತೆ. ಯೋಗ್ಯತೆಯೊಂದಕ್ಕೇ ಬೆಲೆಕೊಟ್ಟು, "ಚಂಡಾಲೋಸ್ತು ದ್ವಿಜೋಸ್ತು ವಾ ಮಮ ಗುರುರ್ಯೇಷಾ ಮನೀಷಾ ಮಮ" ಎಂತ ಶಂಕರಾಚಾರ್ಯರು ಉದ್ಘೋಷಿಸಿದ ದೇಶಕ್ಕೆ ಏನು ಹೊತ್ತು ಬಂತಪ್ಪ!

**ಯಶೋದಮ್ಮ.**—(ಅನುತಾಪದಿಂದ) ಬೇಗ ಹೇಳಿ ಜೋಯಿಸರೆ, ಬೇಗ ಹೇಳಿ. ಅವಳ ಗತಿಯೇನಾಯಿತು?

**ರಾಮಾಜೋಯಿಸ.**—ಹಾಗೆ ಬನ್ನಿ. ಮನಸ್ಸು ಹಾಗೆ ಕರುಣ ದಿಂದ ಮರುಗಬೇಕು, ನನ್ನಮ್ಮ. ನಿಮ್ಮ ಹೆಸರಿಗೆ ತಕ್ಕಹಾಗಿದೆ ಈಗಿನ ನಿಮ್ಮ ಕಳವಳ. ತುಂಟ ಕೃಷ್ಣನ್ನ ಸಾಕಿದವಳಲ್ಲವೇ ಆ ಮಹಾತಾಯಿ ಯಶೋದೆ!

**ಯಶೋದಮ್ಮ.**—ನಿಮ್ಮ ದಮ್ಮಯ್ಯ, ಬೇಗ ಹೇಳಿ ಜೋಯಿಸರೆ, ಇದೊಂದೂ ಬೇಡ.

**ರಾಮಾಜೋಯಿಸ.**—ಪಾಪ, ಅನಾಥೆ. ಬಾಯಿಬಾಯಿ ಬಿಟ್ಟಳು. ಕೊನೆಗೆ ನಮ್ಮ ಮನೆ ಹತ್ತಿರ ಬಂದಳು. ನಮ್ಮ ತಂದೆ ಜಗಲಿ ಮೇಲೆ ಕೂತಿದ್ದರು. ಈಗ ನಡೆದ ಹಾಗಿದೆ. ನಾನು ಸೀಬೆಹಣ್ಣು ಕಚ್ಚಿಕೊಂಡು ತಿಂತಾ ಇದ್ದೆ. ನಮ್ಮ ತಂದೆ, "ಸಂಧ್ಯಾವಂದನೆ ಹೊತ್ತಾಯಿತು. ಹೊತ್ತುಮುಳುಗೋ ಹೊತ್ತಿನಲ್ಲಿ ತಿಂತೀಯಪ್ಪ. ಜನಿವಾರ ತೆಗೆದು ನಾಯಿ ಕೊರಳಿಗಾದರೂ ಹಾಕು, ಹೋಗಲಿ. ಹಣ್ಣು ತಿಂದ ಮೇಲಾದರೂ ಸಂಧ್ಯಾವಂದನೆ ಮಾಡು" ಎಂದರು. ಅಷ್ಟು ಹೊತ್ತಿಗೆ ಅವಳು ಬಂದಳು. ಮುಂದಕ್ಕೆ ಹೋಗಲಾರದೆ ಗಟ್ಟಿಯಾಗಿ ಅತ್ತುಬಿಟ್ಟಳು.

**ಯಶೋದಮ್ಮ.**—ಅಬ್ಬ! ಕೇಳ್ತಾ ಇದ್ದರೇ ಉಸಿರು ಸಿಕ್ಕೊಳ್ಳೋ ಹಾಗಾಗುತ್ತೆ. ನಿಮ್ಮ ಧರ್ಮಕ್ಕೆ ಬೇಗ ಹೇಳಿ, ಜೋಯಿಸರೆ.

**ರಾಮಾಜೋಯಿಸ.**—ಅವಳು ಅತ್ತ ಧ್ವನಿ ಕೇಳಿ ನಮ್ಮ ತಾಯಿ ಒಳಗಿನಿಂದ ಓಡಿಬಂದರು. ನಮ್ಮ ತಂದೆ ನಮ್ಮ ತಾಯಿಗೆ ಹೇಳಿದರು, "ಒಳಕ್ಕೆ ಕರೆದುಕೊಂಡು ಹೋಗು. ಸೂಲಗಿತ್ತಿ ಕರೆದುಕೊಂಡು ಬರ್ತೀನಿ" ಅಂತ. ನಮ್ಮ ತಾಯಿ ಒಪ್ಪಲಿಲ್ಲ. "ಇವಳನ್ನು ಮನೆಗೆ ಸೇರಿಸುವ ಮಾತೇ ಬೇಡ. ಉಂಟೆ, ಉಂಟೆ? ಬ್ರಾಹ್ಮಣಿಕೆ ಹೋಗುತ್ತೆ. ಬೇಡಿ. ಸಗುಪಾಟಲು" ಎಂದರು. ನನಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಮೈಯೆಲ್ಲಾ ಕಿವಿಯಾಯಿತು.

**ಯಶೋದಮ್ಮ.**—ಅವಳನ್ನ ಕಳುಹಿಸಿಬಿಟ್ಟರೋ ಹೊರಕ್ಕೆ?

**ರಾಮಾಜೋಯಿಸ.**—ಇಲ್ಲಮ್ಮ. ಆಗ ನಮ್ಮ ತಂದೆ ಎಷ್ಟು ರಭಸದಲ್ಲಿ ಹೇಳಿಬಿಟ್ಟರೋ ನೋಡಿ. ಕೋಪದಿಂದಲ್ಲ. ಜೇನು ಕೊಡ ಹಿಂಡಿದ ಹಾಗೆ ಕಾರುಣ್ಯರಸದಿಂದ. ನಾನು ಅರ್ಥ ತಿಳೀದೇ ಇದ್ದರೂ

ಅಕ್ಷರ ಅಕ್ಷರವನ್ನೂ ಬಾಯಿಪಾಠ ಮಾಡಿ ಜ್ಞಾಪಕವಿಟ್ಟುಕೊಂಡೆ. "ಇದ ರಿಂದ ಬ್ರಾಹ್ಮಣ್ಯ ಬೆಳಗುತ್ತೆ ನೀನೂ ಹೆಂಗಸು. ಅವಳೋ ಈಗ ಅನಾಥೆ. ಆಪತ್ಕಾಲ. ಚಂಡಾಲ ಕೋಪ. ಆ ಗಂಡ ಹಿಂದೆ ಬರಲೇ ಇಲ್ಲ. ಇನ್ನೊಂದು ಜನ್ಮದಲ್ಲಿ ನಮಗೇ ಈ ಅವಸ್ಥೆ ಬಂದರೋ ಅಂತ ಭಾವಿಸಿ ಸಹಾಯ ಮಾಡೋಣ. ಕರೆದುಕೊಂಡು ಹೋಗು. ಒಳಕ್ಕೆ ಹೋಗು, ತಾಯಿ, ಯಾರಾದರೂ ಜೀವ" ಎಂದುಬಿಟ್ಟರು.

**ರಂಗರಾಯ.**—ಎಂಥ ಮನಸ್ಸಪ್ಪ, ಆ ಮಹರಾಯನಿಗೆ! ಆಮೇಲೆ?

**ರಾಮಾಜೋಯಿಸ.**—ಹೆರಿಗೆಯೂ ಆಯಿತು. ಗಂಡು ಮಗು. ಅತ್ತ, ಅವಳ ಗಂಡ ಕಾಯಿಲೆ ಬಿದ್ದ. ಆಮೇಲೆ ಪತ್ತೆಮಾಡಿಕೊಂಡು ಬಂದ. ಅವನ ಸಂತೋಷ ಹೊಟ್ಟೆಯೇ ಹಿಡಿಯಲಾರದು. ನಮ್ಮ ತಂದೆ ಆ ಹುಡುಗನ್ನ ಕಂಡರೆ ಹಿಗ್ಗಿ, ಆಕಾಶದ ಕಡೆಗೆ ಕೈಮುಗಿದು "ನಿನ್ನ ಬೆಳಕಿನ ಜ್ಯೋತಿ ಎಲ್ಲೆಲ್ಲಿ ಯಾವ ಯಾವ ರೂಪದಲ್ಲಿ ಎಷ್ಟೆಷ್ಟಿದೆಯಪ್ಪ" ಎನ್ನುವರು. ಈಗಲೂ, ಅವನು ನನ್ನ "ಭಾಯಿ, ಭಾಯಿ" ಅಂತಾಲೇ ಕೂಗ್ತಾನೆ. ಆಚಾರಕ್ಕೆ ಮಡಿ ಮೈಲಿಗೆಯಾದರೆ ಪ್ರೀತಿಗೆ ಮಡಿ ಮೈಲಿಗೆಯೇನಮ್ಮ?

**ಯಶೋದಮ್ಮ.**—ಮಹಾನುಭಾವರು, ಮಹಾನುಭಾವರು ನೀವು ಆ ಅಪ್ಪನಿಗೆ ತಕ್ಕ ಮಗ.

**ರಾಮಾಜೋಯಿಸ.**—ನಮ್ಮ ತಂದೆ ಯಾವಳೋ ಒಬ್ಬ ಅನಾಥೆಯ ಮಗುವನ್ನೇ ಹಾಗೆ ಪ್ರೀತಿಸುತ್ತಿದ್ದರು. ನಿಮ್ಮ ಮಗನ ಹೆಂಡತಿ. ಅವಳ ಮೇಲೆ ಹೀಗೆ ಮಾಡೋದೆ? ಅವರ ಪಾಡಿಗೆ ಅವರಿರಲಿ. ಅವಳನ್ನ ಮುಟ್ಟಿದಮೇಲೆ ಬೇಕಾದರೆ ಸ್ನಾನಮಾಡಿ ಬಿಡಿ. ಪ್ರೀತಿಯಿಂದ ಇದ್ದರ ತೀರಿತು.

**ರಂಗರಾಯ.**—ಹೌದು ಜೋಯಿಸರೆ, ನೀವು ಹೇಳೋದು ನ್ಯಾಯ.

**ರಾಮಾಜೋಯಿಸ.**—ಸದ್ಯಕ್ಕೆ ನಿಮ್ಮ ಬುದ್ಧಿ ಹೀಗೆ ತಿರುಗಿತಲ್ಲ. ಅಷ್ಟೇ ಬೇಕಾದ್ದು. ಅಲ್ಲಾ ಸ್ವಾಮಿ, ನೀವು ತನ್ನ ಗಂಡನ ತಾಯಿ ತಂದೆಗಳು ಅನ್ನೋದನ್ನ ರಾಮು ಅವಳಿಗೆ ಹೇಳಿದ ಮೇಲೆ ಅವಳು ನಿಮಗೆ ಎಂಥ ಕಾಗದ ಬರೆದಿದ್ದಾಳೆ ನೋಡಿ. ಎಷ್ಟು ವ್ಯಥೆಪಟ್ಟಿದ್ದಾಳೆ ನೋಡಿ.

ಗೋಳೋ ಅಂತ ಅತ್ತುಬಿಟ್ಟಳಂತೆ. ನಿಮಗೆ ಮುಖ ತೋರಿಸೋದಕ್ಕೇ ತನಗೆ ನಾಚಿಕೆ ಅಂತ ಹೇಳಿದಳಂತೆ. ಅದಕ್ಕೋಸ್ಕರವೇ ಅವಳು ಅವತ್ತಿನಿಂದ ಈ ಕಡೆಗೇ ಸುಳಿದಿಲ್ಲವಂತೆ.

**ರಾಮಚಂದ್ರಯ್ಯ.**—ರಾಯರೆ! ನೀವು ಸಾವಿರ ಹೇಳಿ. ಅವಳು ತುಂಬ ಗುಣವಂತೆ.

(ಕೃಷ್ಣಮೂರ್ತಿಯೂ, ಅವನ ಹೆಂಡತಿಯೂ ಪ್ರವೇಶಿಸುವರು.)

**ಕೃಷ್ಣಮೂರ್ತಿಯ ಹೆಂಡತಿ.**—(ಮುಂದೆ ಬಂದು ರಂಗರಾಯನಿಗೂ ಯಶೋದಮ್ಮನಿಗೂ ನಮಸ್ಕಾರ ಮಾಡುವಳು. ಅವರು ಆಶ್ಚರ್ಯದಿಂದ ಅಪ್ರತಿಭರಾಗುವರು.) I did not know the Indian manners. I have insulted you in every possible way. To err is human but to forgive is divine. I am ashamed of Murthy. He too feels sorry for his behaviour. Forgive us, please. (ಬಿಕ್ಕಿ ಬಿಕ್ಕಿ ಅಳುವಳು.)

**ರಂಗರಾಯ.**—That is all right, my child. Don't weep. (ಯಶೋದಮ್ಮನ ಕಡೆಗೆ ನೋಡುವನು.)

**ರಾಮಾಜೋಯಿಸ.**—(ಯಶೋದಮ್ಮನನ್ನು ಕುರಿತು) ನಿಮಗೆ ಇನ್ನೂ ಮನಸ್ಸು ಬರಲಿಲ್ಲವೆ? ಪಾಪ! ಅವಳಿಗೆ ಸಮಾಧಾನ ಹೇಳಿ, ತಾಯಿ.

**ಯಶೋದಮ್ಮ.**—(ಸೊಸೆಯ ಬೆನ್ನಿನಮೇಲೆ ಕೈಯಾಡಿಸಿ, ಮೈದಡವಿ) Please don't weep. You are my own daughter-in-law. You are my own child.

**ರಾಮಾಜೋಯಿಸ.**—ನಿಮಗೆ ಇಂಗ್ಲಿಷ್ ಬಂದದ್ದೇ ಈಗ ಸಾರ್ಥಕವಾಯಿತು.

**ಕೃಷ್ಣಮೂರ್ತಿಯ ಹೆಂಡತಿ.**—(ಜೋಯಿಸನ ಕಡೆಗೆ ತಿರುಗಿ) Thank you. Mr. Ramachandriah and Murthy have told me everything. Unfortunately I cannot speak to you in your language. I hope to learn it one day. Any people and any country can be proud of you. I shall ever be grateful to you. Murthy's home will be my home. I shall wear the graceful dress of the Indian women and I shall give up meat eating.

(ರಾಮಾಜೋಯಿಸರ ಹೊರತು ಉಳಿದವರೆಲ್ಲರೂ ಆನಂದಪರವಶರಾಗುವರು. ರಾಮಚಂದ್ರಯ್ಯನಂತೂ ಹಿಗ್ಗಿಹೋಗುವನು.)

**ರಾಮಾಜೋಯಿಸ.**—ರಾಯರೇ! ಅದೇನು ನಿಮ್ಮ ಸೊಸೆ ಹೇಳಿದ್ದು? ಭಾಷೆ ಬಾರದೆಹೋದರೆ, ಎಷ್ಟು ಕಷ್ಟ ನೋಡಿದಿರಾ? ಅದೇನು ಹೇಳಿ.

**ರಂಗರಾಯ.**—ಅವಳು ಹೇಳಿದ್ದೇ. ನಿಮ್ಮ ವಿಷಯವನ್ನ ತನ್ನ ಗಂಡನೂ ರಾಮಚಂದ್ರಯ್ಯನೂ ತನಗೆ ಎಲ್ಲಾ ಹೇಳಿದ್ದಾರಂತೆ. ನಿಮ್ಮೊಡನೆ ಕನ್ನಡದಲ್ಲಿ ಮಾತನಾಡೋದಕ್ಕಿಲ್ಲದೆ ಅವಳಿಗೆ ವ್ಯಥೆಯಾಗಿದೆಯಂತೆ. ಒಂದಲ್ಲ ಒಂದುದಿನ ಅವಳು ಅದನ್ನೂ ಕಲೀತಾಳಂತೆ. ನಿಮ್ಮ ಗುಣ ಬಹಳ ಉತ್ಕೃಷ್ಟವಂತೆ. ಯಾವ ಜನಾಂಗಕ್ಕಾದರೂ, ಯಾವ ದೇಶಕ್ಕಾದರೂ ನೀವು ಅಲಂಕಾರಪ್ರಾಯರಾಗಿದ್ದೀರಿ ಅಂತ ಭಾವಿಸಿ ಹೆಮ್ಮೆಪಡಬಹು ದಂತೆ. ಅವಳು ಸರ್ವದಾ ನಿಮಗೆ ಕೃತಜ್ಞಳಾಗಿರ್ತಾಳಂತೆ. ಮೂರ್ತಿಯ ಮನೆಯೇ ಅವಳ ಮನೆಯಂತೆ. ಲಕ್ಷಣವಾಗಿ ಅವಳು ನಮ್ಮ ಸೀಮೆ ಹೆಂಗಸರಂತೆಯೇ ಉಡುಪು ಧರಿಸ್ತಾಳಂತೆ. ಮಾಂಸಾಹಾರ ಬಿಟ್ಟು ಬಿಡ್ತಾಳಂತೆ.

**ರಾಮಾಜೋಯಿಸ.**—(ಸಂತೋಷದಿಂದ) ಹೀಗೆ ಹೇಳಿದಳೇ, ಹೀಗೆ ಹೇಳಿದಳೇ! (ಅವಳ ಬಳಿಗೆ ಹೋಗಿ ಆದರದಿಂದ ಎರಡು ಅಂಗೈಗಳನ್ನೂ ಅವಳ ತಲೆಯ ಮೇಲಿಟ್ಟು) ಚಿರಕಾಲ ಸುಖವಾಗಿ ಬಾಳು ಸನ್ನಮ್ಮ. ರಾಯರೆ! ಇನ್ನು ನೀವು ನಿರಾತಂಕವಾಗಿ ಪ್ರಜಾಪ್ರತಿನಿಧಿ ಸಭೆಗೆ ಮೆಂಬರಾಗಬಹುದು? ನಾವೆಲ್ಲಾ ಸೇರಿ ಯಥಾಶಕ್ತಿಯಾಗಿ ದೇಶಸೇವೆ ಮಾಡೋಣ. ಯಾರು, ಎಲ್ಲಿ, ಯಾವ ರೂಪದಲ್ಲಿ ಒಳ್ಳೆಯ ಕೆಲಸಮಾಡಿದರೂ, ಅದು ದೇಶ ಸೇವೆಯೇ.

**ರಂಗರಾಯ.**—ಎಲ್ಲಾ ತಮ್ಮ ಸಂತೋಷ.

(ತೆರೆಯು ಬೀಳುವುದು.)

## ಸಂಪೂರ್ಣ.

1617—31. ಬೆಂಗಳೂರು ಪ್ರೆಸ್, ಮೈಸೂರು ರೋಡ್. ಬೆಂಗಳೂರು ಸಿಟಿ.